

ಕರ್ನಾಟಕ ಸರ್ಕಾರ

## ಆರ್ಥಿಕ ಇಲಾಖೆ

# ಕರ್ನಾಟಕ ಸರ್ಕಾರಿ ಸೇವಾ (ಪರಿಷ್ಕೃತ ವೇತನ)
# ನಿಯಮಗಳು 1994
# ಮತ್ತು
# ಸಂಬಂಧಪಟ್ಟ ಆದೇಶಗಳು



ಬೆಲೆ : ರೂ. 5

# ಕರ್ನಾಟಕ ಸರ್ಕಾರಿ ಸೇವಾ (ಪರಿಷ್ಕೃತ ವೇತನ)

# ನಿಯಮಗಳು 1994

ಮತ್ತು

# ಸಂಬಂಧಪಟ್ಟ ಆದೇಶಗಳು



## ಸೂಚಿಕೆ

## ಕರ್ನಾಟಕ ಸರ್ಕಾರದ ಕಾರ್ಯವಾಹಿಗಳು

ವಿಷಯ : ವೇತನ ಶ್ರೇಣಿಗಳ ಪರಿಷ್ಕರಣೆ ಮತ್ತು ಇತರ ಸಂಬಂಧಿತ ಆದೇಶಗಳು

**ಆದೇಶ ಸಂಖ್ಯೆ : ಎಫ್‌ಡಿ 12 ಎಸ್‌ಆರ್‌ಪಿ 94, ಬೆಂಗಳೂರು,**
**ದಿನಾಂಕ: 28ನೇ ಮಾರ್ಚ್ 1994.**

1.1 ಸರ್ಕಾರವು ತನ್ನ ಆದೇಶ ಸಂಖ್ಯೆ: ಎಫ್‌ಡಿ 28 ಎಸ್‌ಆರ್‌ಪಿ 93, ದಿನಾಂಕ 23-12-1993ರಲ್ಲಿ ಕರ್ನಾಟಕ ರಾಜ್ಯ ನಾಲ್ಕನೇ ವೇತನ ಆಯೋಗವು ಶಿಫಾರಸ್ಸು ಮಾಡಿದ ಮಾಸ್ಟರ್ ಶ್ರೇಣಿ ಮತ್ತು 20 ಸ್ಥಾಯಿ ವೇತನ ಶ್ರೇಣಿಗಳನ್ನು ಒಪ್ಪಿಕೊಂಡು ಆದೇಶ ಹೊರಡಿಸಿದೆ.

1.2 ಸರ್ಕಾರವು ಈಗ ಈ ಮುಂದಿನ ಆದೇಶಗಳನ್ನು ಹೊರಡಿಸುತ್ತದೆ:-

2

## 2. ಪರಿಷ್ಕೃತ ವೇತನ ಶ್ರೇಣಿಗಳು

2.1 ಈಗಿರುವ ವೇತನ ಶ್ರೇಣಿಗಳನ್ನು ಈ ಮುಂದೆ ನಿರ್ದಿಷ್ಟಪಡಿಸಿರುವಂತೆ ಪರಿಷ್ಕರಿಸಲಾಗಿದೆ:

| ಕ್ರಮ ಸಂಖ್ಯೆ | ಈಗಿರುವ ವೇತನ ಶ್ರೇಣಿಗಳು | ಪರಿಷ್ಕೃತ ವೇತನ ಶ್ರೇಣಿಗಳು |
|---|---|---|
| 1 | 2 | 3 |
| | ರೂ. | ರೂ. |
| 1. | 780–15–900–20–1040 | 840–15–900–20–1100–30–1340 |
| 2. | 810–15–900–20–1100–30–1310 | 870–15–900–20–1100–30–1400–40–1520 |
| 3. | 870–15–900–20–1100–30–1400–40–1600 | 940–20–1100–30–1400–40–1680 |
| 4. | 960–20–1100–30–1400–40–1760 | 1040–20–1100–30–1400–40–1800–50–1900 |
| 5. | 1040–20–1100–30–1400–40–1800–50–1900 | 1130–30–1400–40–1800–50–2100 |
| 6. | 1190–30–1400–40–1800–50–2200 | 1280–30–1400–40–1800–50–2300–75–2375 |

| 1 | 2 | 3 |
|---|---|---|
| | ರೂ. | ರೂ. |
| 7. | 1280–30–1400–40–1800–50–2300–75–2450 | 1400–40–1800–50–2300–75–2675 |
| 8. | 1400–40–1800–50–2300–75–2750 | 1520–40–1800–50–2300–75–2900 |
| 9. | 1600–40–1800–50–2300–75–2900–90–2990 | 1720–40–1800–50–2300–75–2900–100–3300 |
| 10. | 1720–40–1800–50–2300–75–2900–90–3170 | 1900–50–2300–75–2900–100–3700 |
| 11. | 1760–40–1800–50–2300–75–2900–90–3350 | 1900–50–2300–75–2900–100–3700 |
| 12. | 1900–50–2300–75–2900–90–3350–100–3650 | 2050–50–2300–75–2900–100–3700–125–3950 |
| 13. | 2000–50–2300–75–2900–90–3350–100–3750 | 2150–50–2300–75–2900–100–3700–125–4200 |
| 14. | 2200–50–2300–75–2900–90–3350–100–3950–120–4070 | 2375–75–2900–100–3700–125–4450 |
| 15. | 2450–75–2900–90–3350–100–3950–120–4190 | 2600–75–2900–100–3700–125–4575 |
| 16. | 3170–90–3350–100–3950–120–4430 | 3300–100–3700–125–4700–150–5300 |
| 17. | 3650–100–3950–120–4550 | 3825–125–4700–150–5300–175–5825 |

| 1 | 2 | 3 |
|---|---|---|
| | ರೂ. | ರೂ. |
| 18. | 4070–120–4550–125–4925 | 4200–125–4700–150–5300–175–6000 |
| 19. | 4550–125–5300–150–5600 | 4700–150–5300–175–6000–200–6400 |
| 20. | 4925–125–5300–150–5750 | 5150–150–5300–175–6000–200–6600 |
| 21. | 5600–150–5750–175–6100–200/2–6300 | 5825–175–6000–200–6800 |

2.2 ಪರಿಷ್ಕೃತ ವೇತನ ಶ್ರೇಣಿಗಳು ಔದ್ಯಮಿಕ ಕೆಲಸಗಾರರ ಅಖಿಲ ಭಾರತ ಸರಾಸರಿ ಗ್ರಾಹಕ ಬೆಲೆ ಸೂಚ್ಯಂಕ ಸಾಮಾನ್ಯ (ಆಧಾರ ವರ್ಷ 1960=100) ಸಂಖ್ಯೆಗಳಲ್ಲಿ 632 ಅಂಶಗಳ ಸೂಚ್ಯಂಕ ಸರಾಸರಿಯಿಂದ ನಿರೂಪಿಸಲಾದ ಜೀವನ ಪರಿಸ್ಥಿತಿ ವೆಚ್ಚಕ್ಕೆ ಸಂಬಂಧಿಸಿ ಮುಂದುವರಿಸಲಾಗಿದೆ.

2.3 ಪರಿಷ್ಕೃತ ವೇತನ ಶ್ರೇಣಿಗಳು ರೂ. 840–15–900–20–1100–30–1400–40–1800–50–2300–75–2900–100–3700–125–4700–150–5300–175–6000–200–6800ರ ಮಾಸ್ಟರ ವೇತನ ಶ್ರೇಣಿಯ ನಿರ್ದಿಷ್ಟ ಭಾಗಗಳಾಗಿವೆ.

2.4 1993 ಜುಲೈ 1 ರಿಂದ ಮೊದಲ್ಗೊಂಡು ಯಾವುದೇ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯು ಮೇಲಿನ 2.1 ಪ್ಯಾರಾದ (2)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದಂತೆ ಅದಕ್ಕೆ ಅನ್ವಯವಾಗುವ ಪ್ರಸಕ್ತ ವೇತನ ಶ್ರೇಣಿಯ ಎದುರಿಗೆ ತೋರಿಸಲಾದಂತೆ ಅದೇ ಪ್ಯಾರಾದ (3)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದ ಪರಿಷ್ಕೃತ ವೇತನ ಶ್ರೇಣಿಯಾಗಿರತಕ್ಕದು.

2.5 ವೇತನ ಆಯೋಗದ ಶಿಫಾರಸ್ಸುಗಳಿಂದ ಉದ್ಭವಿಸುವ ಕೆಲವೊಂದು ವರ್ಗದ ಹುದ್ದೆಗಳಿಗೆ ತತ್ಸಮಾನ ವೇತನ ಶ್ರೇಣಿಗಳಿಗಿಂತ ಹೆಚ್ಚಿನ/ಕಡಿಮೆ ವೇತನ ಶ್ರೇಣಿ ನೀಡಿದ ಸೂಕ್ತತೆಯನ್ನು ಒಳಗೊಂಡಂತೆ ಇತರೆ ಅಂಶಗಳಾದ ನಿವೃತ್ತಿ ವೇತನದ ಪರಿಷ್ಕರಣೆಯ ಲಾಭ, ವಿಶೇಷ ವೇತನ, ಮನೆ ಬಾಡಿಗೆ ಭತ್ಯೆ, ಪ್ರಯಾಣ ಭತ್ಯೆ, ದಿನ ಭತ್ಯೆ, ಇತರೆ ಭತ್ಯೆಗಳ ಹಾಗೂ ಸೌಲಭ್ಯ ಇತ್ಯಾದಿಗಳ ಪರಿಷ್ಕರಣೆಯನ್ನು, ಸರ್ಕಾರ ಆದೇಶ ಸಂಖ್ಯೆ: ಎಫ್‌ಡಿ 28 ಎಸ್‌ಆರ್‌ಪಿ 93 ದಿನಾಂಕ 24–02–1994 ರಲ್ಲಿ ರಚಿಸಲ್ಪಟ್ಟ ಪದೀಯ ಸಮಿತಿಯು

ಪರಿಶೀಲಿಸುತ್ತದೆ. ಪದೀಯ ಸಮಿತಿಯು ಮಾಡತಕ್ಕ ಶಿಫಾರಸ್ಸುಗಳ ಬಗ್ಗೆ ಸರ್ಕಾರದ ತೀರ್ಮಾನವನ್ನು ಕಾಯ್ದಿರಿಸಿ, ಆ ಹುದ್ದೆಗಳಿಗೆ ಅನ್ವಯವಾಗುವ ಪರಿಷ್ಕೃತ ವೇತನ ಶ್ರೇಣಿಗಳೂ ಸಹ ಮೇಲೆ ನಿರ್ದಿಷ್ಟಪಡಿಸಿರುವಂತಹ ಸಂವಾದಿ ಪರಿಷ್ಕೃತ ವೇತನ ಶ್ರೇಣಿಗಳಾಗಿರತಕ್ಕದ್ದು.

## 3. ಜಾರಿಗೆ ಬರುವ ದಿನಾಂಕ

3.1 ಪರಿಷ್ಕೃತ ವೇತನ ಶ್ರೇಣಿಗಳು 1993ರ ಜುಲೈ 1 ರಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದು. ಆದರೂ, ಪರಿಷ್ಕೃತ ವೇತನ ಶ್ರೇಣಿಗಳ ಹಣಕಾಸು ಪ್ರಯೋಜನವು 1994ರ ಜನವರಿ 1 ರಿಂದ ದೊರೆಯತಕ್ಕದು.

3.2 ವೇತನ ಶ್ರೇಣಿಗಳ ಪರಿಷ್ಕರಣೆಯ ಕಾರಣದಿಂದ ಆಗಿರುವ ವೇತನ ಮತ್ತು ಭತ್ಯೆಗಳಲ್ಲಿನ ಹೆಚ್ಚುವರಿಯನ್ನು 1994ರ ಏಪ್ರಿಲ್‌ನಿಂದ ನಗದಾಗಿ ಸಂದಾಯ ಮಾಡತಕ್ಕುದು. ಅಂದರೆ, 1994ರ ಏಪ್ರಿಲ್‌ನಲ್ಲಿ ಸಂದಾಯ ಮಾಡತಕ್ಕ 1994ರ ಏಪ್ರಿಲ್ ತಿಂಗಳ ಸಂಬಳ.

3.3 1994ರ ಜನವರಿ 1 ರಿಂದ 1994ರ ಮಾರ್ಚ್ 31ರ ವರೆಗಿನ ಅವಧಿಯಲ್ಲಿ ನಿವೃತ್ತಿಯಾದ ಅಥವಾ ಸೇವೆಯಲ್ಲಿರುವಾಗ ಮರಣ ಹೊಂದಿದ ಕಾರಣದಿಂದ ಸೇವೆಯಲ್ಲಿರುವುದು ನಿಂತು ಹೋಗಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 1994ರ ಜನವರಿ 1ರಿಂದ ನಿವೃತ್ತಿ ಹೊಂದಿದ ಅಥವಾ ಸೇವೆಯಲ್ಲಿರುವಾಗ ಮರಣ ಹೊಂದಿದ ದಿನಾಂಕದವರೆಗಿನ ಅವಧಿಗೆ ಸಂದಾಯ ಮಾಡಬೇಕಾದ ಬಾಕಿಗಳನ್ನು ನಗದಾಗಿ ಸಂದಾಯ ಮಾಡತಕ್ಕುದು.

## 4. ಪರಿಷ್ಕೃತ ವೇತನ ಶ್ರೇಣಿಗಳಲ್ಲಿ ವೇತನ ನಿಗದಿ

4.1 ಸರ್ಕಾರಿ ನೌಕರನ ಪ್ರಾರಂಭಿಕ ವೇತನವನ್ನು ಸಂವಾದಿ ಪರಿಷ್ಕೃತ ವೇತನ ಶ್ರೇಣಿಯಲ್ಲಿ ಈ ಮುಂದಿನ ವಿಧಾನದಲ್ಲಿ ನಿಗದಿಪಡಿಸತಕ್ಕುದು.

(i) ಕನಿಷ್ಠ ರೂ. 60 ಕ್ಕೆ ಒಳಪಟ್ಟು ಮೂಲ ವೇತನದ ಶೇಕಡ 7.5 ರಷ್ಟು ಮೊಬಲಗನ್ನು ಸರ್ಕಾರಿ ನೌಕರನ ಈಗಿನ ಉಪಲಬ್ಧಿಗೆ ಸೇರಿಸತಕ್ಕುದು. (ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 36 ಎಸ್‌ಆರ್‌ಪಿ 92 ದಿನಾಂಕ 16–10–1992 ರಲ್ಲಿ ಮಂಜೂರು ಮಾಡಲಾದ ತಾತ್ಕಾಲಿಕ ಪರಿಹಾರವು ಶೇಕಡಾ 7.5 ಹೆಚ್ಚಳದಲ್ಲಿ ವಿಲೀನಗೊಳ್ಳಲ್ಪಟ್ಟಿದೆ.)

(ii) ಹೀಗೆ ಈಗಿನ ಮೂಲ ವೇತನಕ್ಕೆ ಸೇರಿಸಿ ಹೆಚ್ಚಿಸಿದ ನಂತರ ಮೂಲ ವೇತನವನ್ನು ಸಂವಾದಿ ಪರಿಷ್ಕೃತ ವೇತನ ಶ್ರೇಣಿಯಲ್ಲಿ ಈ ಮುಂದಿನಂತೆ ನಿಗದಿಪಡಿಸತಕ್ಕುದು.

(ಎ) ಹಾಗೆ ಮೇಲಿನಂತೆ ಲೆಕ್ಕ ಹಾಕಲಾದ ಒಟ್ಟು ಮೊಬಲಗು ಪರಿಷ್ಕೃತ ವೇತನ ಶ್ರೇಣಿಯ ಕನಿಷ್ಠಕ್ಕಿಂತಲೂ ಕಡಿಮೆಯಿರುವಲ್ಲಿ ವೇತನವನ್ನು ಕನಿಷ್ಠಕ್ಕೆ ನಿಗದಿಪಡಿಸತಕ್ಕುದು;

(ಬಿ) ಮೇಲಿನಂತೆ ಲೆಕ್ಕ ಹಾಕಲಾದ ಮೊಬಲಗು ಕನಿಷ್ಠಕ್ಕಿಂತಲೂ ಕಡಿಮೆ ಇಲ್ಲದಿದ್ದು ಆದರೆ ಪರಿಷ್ಕೃತ ವೇತನ ಶ್ರೇಣಿಯ ಗರಿಷ್ಠಕಿಂತಲೂ ಕಡಿಮೆಯಿರುವಲ್ಲಿ ವೇತನವನ್ನು ಪರಿಷ್ಕೃತ ವೇತನ ಶ್ರೇಣಿಯಲ್ಲಿ ಮೇಲಿನ ಮೊಬಲಗಿನ ನಂತರದ ಹಂತದಲ್ಲಿ ನಿಗದಿಪಡಿಸತಕ್ಕದು ; ಮತ್ತು

(ಸಿ) ಮೇಲಿನಂತೆ ಲೆಕ್ಕ ಹಾಕಲಾದ ಮೊಬಲಗು ಪರಿಷ್ಕೃತ ವೇತನ ಶ್ರೇಣಿಯ ಗರಿಷ್ಠಕ್ಕೆ ಸಮನಾಗಿರುವಲ್ಲಿ, ಅಥವಾ ಅದಕ್ಕಿಂತಲೂ ಹೆಚ್ಚಿರುವಲ್ಲಿ, ವೇತನವನ್ನು ಆ ಗರಿಷ್ಠಕ್ಕೆ ನಿಗದಿಪಡಿಸತಕ್ಕದು ಮತ್ತು ಹೀಗೆ ಲೆಕ್ಕ ಹಾಕಿ ಬಂದ ಮೊತ್ತದ ನಂತರದ ಮಾಸ್ಟರ ಶ್ರೇಣಿಯಲ್ಲಿನ ಹಂತ ಪ್ಯಾರಾ 2.3 ರಲ್ಲಿ) ಮತ್ತು ಗರಿಷ್ಠ ಹಂತ– ಇವುಗಳ ನಡುವಣ ವ್ಯತ್ಯಾಸದ ಮೊತ್ತವನ್ನು ಆತನ ವೈಯಕ್ತಿಕ ವೇತನವೆಂದು ಪರಿಗಣಿಸತಕ್ಕದು.

ಈ ಉದ್ದೇಶಕ್ಕಾಗಿ, ''ಮೂಲ ವೇತನ'' ಎಂದರೆ ಕರ್ನಾಟಕ ಸರ್ಕಾರಿ ಸೇವಾ (ಪರಿಷ್ಕೃತ ವೇತನ) ನಿಯಮಗಳ, 1994ರ 3ನೇ ನಿಯಮದ (ಎ) ಖಂಡದಲ್ಲಿ ಪರಿಭಾಷಿಸಿರುವಂತಹ ಮೂಲ ವೇತನ.

4.2 ಪ್ರಸಕ್ತ ವೇತನ ಶ್ರೇಣಿಯಲ್ಲಿನ ಹಂತಗಳನ್ನು ಮತ್ತು ಪರಿಷ್ಕೃತ ವೇತನ ಶ್ರೇಣಿಯಲ್ಲಿ ನಿಗದಿಪಡಿಸಬೇಕಾದ ವೇತನವನ್ನು ತೋರಿಸುವ ಹೊಂದಿಕೆ ಕೋಷ್ಟಕವನ್ನು ನಾಲ್ಕನೇ ಅನುಸೂಚಿಯಾಗಿ ಕರ್ನಾಟಕ ಸರ್ಕಾರಿ ಸೇವಾ (ಪರಿಷ್ಕೃತ ವೇತನ) ನಿಯಮಗಳು, 1994ಕ್ಕೆ ಅನುಬಂಧಿಸಲಾಗಿದೆ.

4.3 ಹಿಂದೆ ಹೇಳಿದ ನಿಯಮಗಳ ಮೇರೆಗೆ, ಸರ್ಕಾರಿ ನೌಕರನಿಗೆ ಅನ್ವಯವಾಗುವ ಪರಿಷ್ಕೃತ ಶ್ರೇಣಿಯಲ್ಲಿ ವೇತನವನ್ನು ಪಡೆಯಲು ಅವನು ಆಯ್ಕೆ ಚಲಾಯಿಸುವ ಅಗತ್ಯವಿಲ್ಲ. 1993ರ ಜುಲೈ 1 ರಂದು ಸೇವೆಯಲ್ಲಿದ್ದಂಥ ಪ್ರತಿಯೊಬ್ಬ ಸರ್ಕಾರಿ ನೌಕರನ ಪ್ರಾರಂಭಿಕ ವೇತನವನ್ನು ಸದರಿ ನಿಯಮಗಳ ನಾಲ್ಕನೇ ಅನುಸೂಚಿಯ 1ನೇ ಅಂಕಣದಲ್ಲಿ ಕಂಡುಬರುವ ಪ್ರಸಕ್ತ ವೇತನ ಶ್ರೇಣಿಯಲ್ಲಿನ ಆತನ ಮೂಲ ವೇತನಕ್ಕೆ ಸಂವಾದಿಯಾಗಿ ಅದರ 2ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿರುವ ಹಂತದಲ್ಲಿ ನಿಗದಿಪಡಿಸತಕ್ಕದು. ಪರಿಷ್ಕೃತ ಶ್ರೇಣಿಯಲ್ಲಿನ ವೇತನವನ್ನು 1993ರ ಜುಲೈ 1 ರಿಂದ ಜಾರಿಗೆ ಬರುವಂತೆ ಕಾಲ್ಪನಿಕವಾಗಿ ನಿಗದಿಪಡಿಸತಕ್ಕದು.

4.4 ವೇತನ ಬಡ್ತಿಯು (ಸ್ಥಗಿತ ವೇತನ ಬಡ್ತಿ, ಉನ್ನತ ವಿದ್ಯಾರ್ಹತೆಯನ್ನು ಹೊಂದಿದ್ದಕ್ಕಾಗಿ ನೀಡುವ ಮುಂಗಡ ವೇತನ ಬಡ್ತಿಯೂ ಸೇರಿದಂತೆ) 1993ರ ಜುಲೈ 2 ರಿಂದ 1994ರ ಜೂನ್ 30ರ ವರೆಗಿನ ಅವಧಿಯಲ್ಲಿ ಸಾಮಾನ್ಯ ಕ್ರಮದಲ್ಲಿ ಪ್ರಸಕ್ತ ವೇತನ ಶ್ರೇಣಿಯಲ್ಲಿ ಸರ್ಕಾರಿ ನೌಕರನಿಗೆ ಪ್ರಾಪ್ತವಾಗುವಂತಿದ್ದರೆ, ಅದು ಆತನಿಗೆ ಅನುಕೂಲವಾಗುವಂತಿದ್ದರೆ

ಪರಿಷ್ಕೃತ ವೇತನ ಶ್ರೇಣಿಯಲ್ಲಿನ ಆತನ ವೇತನವನ್ನು ಕರ್ನಾಟಕ ಸರ್ಕಾರಿ ಸೇವಾ (ಪರಿಷ್ಕೃತ ವೇತನ) ನಿಯಮಗಳು, 1994ರ ಉಪ–ಬಂಧಗಳಿಗನುಸಾರವಾಗಿ, ಅಂಥ ವೇತನ ಬಡ್ತಿಯು ಪ್ರಾಪ್ತವಾಗುವ ದಿನಾಂಕದಿಂದ ಪುನರ್‌ನಿಗದಿಪಡಿಸತಕ್ಕುದು.

4.5 1993ರ ಜುಲೈ 1 ರಂದು ಅಥವಾ ನಂತರ ಸೇವೆಗೆ ಸೇರಿರುವ ಅಥವಾ 1993ರ ಜುಲೈ 1ಕ್ಕೆ ಮೊದಲು ತಾನು ಧಾರಣ ಮಾಡಿರುವ ಹುದ್ದೆಯಲ್ಲದ ಇತರ ಯಾವುದೇ ಹುದ್ದೆಗೆ ಬಡ್ತಿ ಹೊಂದಿರುವ ಅಥವಾ ನೇಮಕ ಹೊಂದಿರುವ ಸರ್ಕಾರಿ ನೌಕರನ ವೇತನವನ್ನು 1993ರ ಡಿಸೆಂಬರ್ 31ಕ್ಕೆ ಮುಕ್ತಾಯವಾಗುವ ಅವಧಿಗೆ ಸಂಬಂಧಿಸಿದ ವೇತನದ ಬಾಕಿಗಳ ಬಗ್ಗೆ ಯಾವುದೇ ಕ್ಲೇಮು ಇಲ್ಲದಂತೆ ಕರ್ನಾಟಕ ಸರ್ಕಾರಿ ಸೇವಾ ನಿಯಮಗಳ ಉಪ–ಬಂಧಗಳಿಗನುಸಾರವಾಗಿ ನಿಗದಿ ಪಡಿಸತಕ್ಕುದು. ಅಂಥ ಪ್ರಕರಣಗಳಲ್ಲಿ ಕರ್ನಾಟಕ ಸರ್ಕಾರಿ ಸೇವಾ (ಪರಿಷ್ಕೃತ ವೇತನ) ನಿಯಮಗಳು, 1994ರ ಮೇರೆಗೆ 'ಹೊಂದಿಕೆ ಪ್ರಯೋಜನ' ದೊರೆಯುವುದಿಲ್ಲ.

4.6 ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 36 ಎಸ್‌ಆರ್‌ಪಿ 92 ದಿನಾಂಕ 16–10–1992ರಲ್ಲಿ ಸರ್ಕಾರಿ ನೌಕರರಿಗೆ ಮಂಜೂರಾದ ತಾತ್ಕಾಲಿಕ ಪರಿಹಾರವನ್ನು ದಿನಾಂಕ 1–4–1994 ರಿಂದ ಸಂದಾಯ ಮಾಡುವಂತಿಲ್ಲ. ಆದರೆ, ಯುಜಿಸಿ :ಎಐಸಿಟಿಇ ವೇತನ ವೇತನ ಶ್ರೇಣಿಗಳಲ್ಲಿರುವ ವಿಶ್ವವಿದ್ಯಾನಿಲಯಗಳ, ಇಂಜಿನಿಯರಿಂಗ್ ಮತ್ತು ಪದವಿ ಮಹಾವಿದ್ಯಾಲಯಗಳ ಭೋಧಕ ಸಿಬ್ಬಂದಗಳಿಗೆ ಸಂಬಂಧಿಸಿದಂತೆ ತಾತ್ಕಾಲಿಕ ಪರಿಹಾರದ ಸಂದಾಯವು ಮುಂದಿನ ಆದೇಶ ಹೊರಡಿಸುವವರೆಗೆ ಮುಂದುವರೆಯುತ್ತದೆ.

4.7 ಪರಿಷ್ಕೃತ ವೇತನ ಶ್ರೇಣಿಗಳಲ್ಲಿ ಮಾಡಿರುವ ವೇತನ ನಿಗದೀಕರಣದ ಕೆಲವು ಉದಾಹರಣೆಗಳನ್ನು ಈ ಆದೇಶದ 1ನೇ ಅನುಬಂಧದಲ್ಲಿ ಕೊಡಲಾಗಿದೆ.

## 5. ಪುಷ್ಕೃತ ಶ್ರೇಣಿಯಲ್ಲಿ ವೇತನ ಪಡೆಯಲು ಅಧಿಕಾರ ನೀಡಿಕೆ :

5.1 ಕಚೇರಿಗಳ ಮುಖ್ಯಾಧಿಕಾರಿಗಳು ತಮ್ಮ ನಿಯಂತ್ರಣದಲ್ಲಿರುವ ಸರ್ಕಾರಿ ನೌಕರರ ವೇತನವನ್ನು ಕರ್ನಾಟಕ ಸರ್ಕಾರಿ ಸೇವಾ (ಪರಿಷ್ಕೃತ ವೇತನ) ನಿಯಮಗಳು, 1994ರ, ಇದರೊಂದಿಗೆ ಓದಿಕೊಳ್ಳಲಾದ ಹೊಂದಿಕೆ ಕೋಷ್ಟಕಕ್ಕೆ ಅನುಸಾರವಾಗಿ ನಿಗದಿಪಡಿಸಲು ಸಕ್ಷಮರಾಗಿರತಕ್ಕುದು.

5.2 ಯಾವ ಸರ್ಕಾರಿ ನೌಕರರ ವೇತನವು ಮಹಾಲೇಖಾಪಾಲರಿಂದ ಅಧಿಕೃತಗೊಳಿಸಲಾಗುವುದೋ ಅಥವಾ ಐ.ಆರ್.ಎಲ್.ಎ. ವ್ಯವಸ್ಥೆಗೆ ಒಳಪಟ್ಟಿರುವುದೋ ಆ ಸರ್ಕಾರಿ ನೌಕರರ ಸಂಬಂಧದಲ್ಲಿ ಅವರ ವೇತನವನ್ನು ಮಹಾಲೇಖಾಪಾಲರು ನಿಗದಿಪಡಿಸತಕ್ಕುದು.

5.3 ಈ ಆದೇಶದ ಅನುಬಂಧ–IIರಲ್ಲಿ ಕೊಡಲಾದ ನಮೂನೆಯಲ್ಲಿ ಪರಿಷ್ಕೃತ ವೇತನ ಶ್ರೇಣಿಯಲ್ಲಿ ವೇತನ ನಿಗದಿ ಮಾಡತಕ್ಕುದು. ಈ ನಮೂನೆಯ ಒಂದು ಪ್ರತಿಯನ್ನು

ಸೇವಾ ಪುಸ್ತಕದಲ್ಲಿ ಅಂಟಿಸತಕ್ಕುದು ; ಒಂದು ಪ್ರತಿಯನ್ನು ಸರ್ಕಾರಿ ನೌಕರನ ವೇತನವನ್ನು ಪರಿಷ್ಕೃತ ವೇತನ ಶ್ರೇಣಿಯಲ್ಲಿ ಪ್ರಥಮ ಬಾರಿಗೆ ಪಡೆಯುವ ಸಂಬಳದ ಬಿಲ್ಲಿಗೆ ಲಗತ್ತಿಸತಕ್ಕುದು ಮತ್ತು ಒಂದು ಪ್ರತಿಯನ್ನು ಸಂಬಂಧಪಟ್ಟ ಇಲಾಖಾ ಮುಖ್ಯಾಧಿಕಾರಿಗೆ ಕಳುಹಿಸತಕ್ಕುದು.

5.4 ಸರ್ಕಾರಿ ನೌಕರರ ವೇತನವನ್ನು ಪರಿಷ್ಕೃತ ವೇತನ ಶ್ರೇಣಿಯಲ್ಲಿ ಬಹಳ ತ್ವರಿತವಾಗಿ ಮತ್ತು 1994ನೇ ಏಪ್ರಿಲ್ 30ರೊಳಗಾಗಿ ನಿಗದಿಪಡಿಸುವಂತೆ ಕಛೇರಿ ಮುಖ್ಯಸ್ಥರು ಖಚಿತಪಡಿಸಿಕೊಳ್ಳಬೇಕು.

## 6. ತುಟ್ಟಿ ಭತ್ಯ

ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 22 ಎಸ್‌ಆರ್‌ಪಿ 87 ದಿನಾಂಕ 18–3–1987ರ ಕಂಡಿಕೆ (6)ರಲ್ಲಿ ಆದೇಶಿಸಿದಂತೆ ತುಟ್ಟಿಭತ್ಯೆಯ ಸಂದಾಯದ ಕ್ರಮ ಬದ್ಧಗೊಳಿಸುವಿಕೆ ಪ್ರಸಕ್ತ ನೀತಿಯ ಅನುಸಾರ ಮುಂದಿನ ಆದೇಶದವರೆಗೆ ಮುಂದುವರೆಯುತ್ತದೆ.

## 7. ಕಾಲಬದ್ಧ ಬಡ್ತಿ/ಹಿರಿಯ ವೇತನ ಶ್ರೇಣಿಗೆ ಸ್ವಯಂ ಚಾಲಿತ ವಿಶೇಷ ಬಡ್ತಿ

7.1 ಕಾಲಬದ್ಧ ಬಡ್ತಿ/ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ಬಡ್ತಿಯ ಈಗಿರುವ ಯೋಜನೆಯು ಈ ಮುಂದಿನ ಕಂಡಿಕೆಗಳಲ್ಲಿ ಸೂಚಿಸಿರುವ ಮಾರ್ಪಾಡಿನೊಂದಿಗೆ ಮುಂದಿನ ಆದೇಶಗಳವರೆಗೆ ಜಾರಿಯಲ್ಲಿ ಮುಂದುವರಿಯುವುದು.

7.2 1993 ಜುಲೈ 1 ರಿಂದ ಜಾರಿಗೆ ಬರುವಂತೆ, ಕರ್ನಾಟಕ ಸರ್ಕಾರಿ ಸೇವಾ (ಕಾಲಬದ್ಧ ಬಡ್ತಿ) ನಿಯಮಗಳು, 1983ರ ಅನುಸಾರವಾಗಿ ಒಂದು ಹುದ್ದೆಯನ್ನು ಧಾರಣ ಮಾಡಿರುವ ಸರ್ಕಾರಿ ನೌಕರನಿಗೆ ಗ್ರಾಹ್ಯವಾದ ವೇತನದ ಆಯ್ಕೆ ಕಾಲಿಕ ವೇತನ ಶ್ರೇಣಿಯು ಕೆಳಗೆ ಅಂಕಣ (3)ರಲ್ಲಿ, ಅದಕ್ಕೆ ಅಂಕಣ (2) ರಲ್ಲಿ ನಿರ್ದಿಷ್ಟಪಡಿಸಲಾದಂತೆ ಅನ್ವಯವಾಗುವ ಪರಿಷ್ಕೃತ ವೇತನ ಶ್ರೇಣಿಯ ಎದುರಿಗೆ ನಿರ್ದಿಷ್ಟಪಡಿಸಲಾದ ಪರಿಷ್ಕೃತ ಆಯ್ಕೆ ಕಾಲಿಕ ವೇತನ ಶ್ರೇಣಿಯಾಗಿರತಕ್ಕುದು. ಪರಂತು, ಕರ್ನಾಟಕ ಸರ್ಕಾರಿ ಸೇವಾ (ಪರಿಷ್ಕೃತ ವೇತನ) ನಿಯಮಗಳು, 1982 ರಡಿಯಲ್ಲಿನ ರೂ. 410–700 ವೇತನ ಶ್ರೇಣಿಯ ಹುದ್ದೆಯನ್ನು ಧಾರಣ ಮಾಡಿರುವ ಒಬ್ಬ ಸರ್ಕಾರಿ ನೌಕರನಿಗೆ, ಕರ್ನಾಟಕ ಸರ್ಕಾರಿ ಸೇವಾ (ಕಾಲಬದ್ಧ) ನಿಯಮಗಳು, 1983 ರಡಿಯಲ್ಲಿ, 1986ರ ಜುಲೈ 1ಕ್ಕೆ ಮುಂಚೆ ರೂ. 490–950ರ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ನೀಡಲಾಗಿದ್ದರೆ, ಆತನಿಗೆ ಅನ್ವಯವಾಗುವ ಪರಿಷ್ಕೃತ ಆಯ್ಕೆ ಕಾಲಿಕ ವೇತನ ಶ್ರೇಣಿಯು ರೂ.1040–1900 ಆಗಿರತಕ್ಕುದು–

| ಕ್ರಮ ಸಂಖ್ಯೆ | ವೇತನ ಶ್ರೇಣಿ | ಆಯ್ಕೆ ಕಾಲಿಕ ವೇತನ ಶ್ರೇಣಿ |
|---|---|---|
| 1 | 2 | 3 |
| | ರೂ. | ರೂ. |
| 1. | 840–1340 | 870–1520 |
| 2. | 870–1520 | 940–1680 |
| 3. | 940–1680 | 1040–1900 |
| 4. | 1040–1900 | 1130–2100 |
| 5. | 1130–2100 | 1280–2375 |
| 6. | 1280–2375 | 1400–2675 |
| 7. | 1400–2675 | 1520–2900 |
| 8. | 1520–2900 | 1720–3300 |
| 9. | 1720–3300 | 1900–3700 |
| 10. | 1900–3700 | 2050–3950 |
| 11. | 2050–3950 | 2150–4200 |

7.3 1993ರ ಜುಲೈ 1ರಿಂದ ಜಾರಿಗೆ ಬರುವಂತೆ ಕರ್ನಾಟಕ ಸರ್ಕಾರಿ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂ ಚಾಲಿತ ವಿಶೇಷ ಮುಂಬಡ್ತಿ ನೀಡುವಿಕೆ) ನಿಯಮಗಳು, 1991ರ ಅನುಸಾರವಾಗಿ ಒಂದು ಹುದ್ದೆಯನ್ನು ಧಾರಣ ಮಾಡಿರುವ ಸರ್ಕಾರಿ ನೌಕರನಿಗೆ ದೊರೆಯುವ ಹಿರಿಯ ವೇತನ ಶ್ರೇಣಿಯು 1983ರ ಕರ್ನಾಟಕ ಸರ್ಕಾರಿ ಸೇವಾ (ಕಾಲಬದ್ಧ ಬಡ್ತಿ) ನಿಯಮಗಳ ಮೇರೆಗೆ ಮಂಜೂರು ಮಾಡಿದ ಪರಿಷ್ಕೃತ ಆಯ್ಕೆ ಕಾಲಿಕ ಶ್ರೇಣಿಯ ನಂತರದ ಪರಿಷ್ಕೃತ ಹಿರಿಯ ವೇತನ ಶ್ರೇಣಿ ಆಗಿರುತ್ತದೆ ಅಥವಾ ಸರ್ಕಾರಿ ನೌಕರನು ಧಾರಣ ಮಾಡಿರುವ ಹುದ್ದೆಗೆ ಅನ್ವಯವಾಗುವಂತೆ 1983ರ ಕರ್ನಾಟಕ ಸರ್ಕಾರಿ ಸೇವಾ (ಕಾಲಬದ್ಧ ಬಡ್ತಿ) ನಿಯಮಗಳಿಗನುಗುಣವಾಗಿ ಮಂಜೂರಾದ ಪರಿಷ್ಕೃತ ಆಯ್ಕೆ ಕಾಲಿಕ ವೇತನ ಶ್ರೇಣಿ ಹಾಗೂ ಮುಂಬಡ್ತಿ ಹುದ್ದೆಯ ಪರಿಷ್ಕೃತ ಶ್ರೇಣಿಯು ಒಂದೇ ಆಗಿದ್ದಲ್ಲಿ ಅಥವಾ ಸರಿಸಮಾನವಾಗಿದ್ದಲ್ಲಿ ಮುಂಬಡ್ತಿಯ ಪರಿಷ್ಕೃತ ವೇತನ ಶ್ರೇಣಿ ಆಗಿರುತ್ತದೆ.

7.4 1993ರ ಜುಲೈ 1ರ ಮುಂಚೆ ಕರ್ನಾಟಕ ಸರ್ಕಾರಿ ಸೇವಾ (ಕಾಲಬದ್ಧ ಬಡ್ತಿ) ನಿಯಮಗಳು ಅಥವಾ 1991ರ ಕರ್ನಾಟಕ ಸರ್ಕಾರಿ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ಮುಂಬಡ್ತಿ ನೀಡುವಿಕೆ) ನಿಯಮಗಳ ಮತ್ತು ಸಂಬಂಧಿಸಿದ ಆದೇಶಗಳನುಸಾರವಾಗಿ ಯಾವ ಸರ್ಕಾರಿ ನೌಕರರಿಗೆ ಆಯಾ ನಿಯಮಗಳನುಸಾರ ಆಯ್ಕೆ ಕಾಲಿಕ ವೇತನ ಶ್ರೇಣಿ ಅಥವಾ ಹಿರಿಯ ವೇತನ ಶ್ರೇಣಿಯನ್ನು ಮಂಜೂರು ಮಾಡಿದ್ದಲ್ಲಿ ಅವರುಗಳ ಪ್ರಾರಂಭಿಕ ವೇತನವನ್ನು 4.1ರಿಂದ 4.3 ರವರೆಗಿನ ಪ್ಯಾರಾಗಳಲ್ಲಿ ನಮೂದಿಸಿದಂತೆ ಸಂವಾದಿ ಪರಿಷ್ಕೃತ ವೇತನ ಶ್ರೇಣಿಯಲ್ಲಿ ನಿಗದಿಪಡಿಸತಕ್ಕುದು.

7.5 1993ನೇ ಜುಲೈ 1ರಂದು ಅಥವಾ ನಂತರ 1983ರ ಕರ್ನಾಟಕ ಸರ್ಕಾರಿ ಸೇವಾ (ಕಾಲಬದ್ಧ ಬಡ್ತಿ) ನಿಯಮಗಳು ಅಥವಾ 1991ರ ಕರ್ನಾಟಕ ಸರ್ಕಾರಿ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ಮುಂಬಡ್ತಿ ನೀಡುವಿಕೆ) ನಿಯಮಗಳು ಮತ್ತು ಸಂಬಂಧಿಸಿದ ಆದೇಶಗಳನುಸಾರವಾಗಿ, 1993ರ ಜುಲೈ 1 ರಂದು ಅಥವಾ ನಂತರ ಆಯ್ಕೆ ಕಾಲಿಕ ವೇತನ ಶ್ರೇಣಿ ಅಥವಾ ಹಿರಿಯ ವೇತನ ಶ್ರೇಣಿಗೆ ಅರ್ಹರಾಗುವ ಸರ್ಕಾರಿ ನೌಕರರ ವೇತನವನ್ನು ಸದರೀ ನಿಯಮಗಳಲ್ಲಿ ಉಪಬಂದಗಳ ಅನುಸಾರ ವಿಧಿಸಲಾದ ಪರಿಷ್ಕೃತ ಆಯ್ಕೆ ಕಾಲಿಕ ವೇತನ ಶ್ರೇಣಿ ಅಥವಾ ಹಿರಿಯ ವೇತನ ಶ್ರೇಣಿಯಲ್ಲಿ ನಿಗದಿಪಡಿಸತಕ್ಕುದು.

## 8. ನಿವೃತ್ತಿ ವೇತನ ಸೌಲಭ್ಯಗಳು

8.1 1993ರ ಜುಲೈ 1ರಿಂದ 1993ರ ಡಿಸೆಂಬರ್ 31ರ ವರೆಗಿನ ಅವಧಿಯಲ್ಲಿ ಸೇವೆಯಿಂದ ನಿವೃತ್ತನಾದ ಅಥವಾ ಸೇವೆಯಲ್ಲಿರುವಾಗಲೇ ಮೃತನಾದ ಕಾರಣದಿಂದ ಸೇವೆಯಲ್ಲಿರುವುದು ಕೊನೆಗೊಂಡ ಸರ್ಕಾರೀ ನೌಕರನ ಸಂದರ್ಭದಲ್ಲಿ ಪರಿಷ್ಕೃತ ವೇತನ ಶ್ರೇಣಿಗಳಲ್ಲಿ ನಿಗದಿಪಡಿಸಲಾದ ಕಾಲ್ಪನಿಕ ವೇತನವನ್ನು, ನಿವೃತ್ತಿ ವೇತನ ಮತ್ತು ಮರಣ ಹಾಗೂ ನಿವೃತ್ತಿ ಉಪದಾನವನ್ನು ಲೆಕ್ಕ ಹಾಕುವ ಉದ್ದೇಶಗಳಿಗಾಗಿ ಲೆಕ್ಕಕ್ಕೆ ತೆಗೆದುಕೊಳ್ಳಲಾಗುವುದು. ಆದಾಗ್ಯೂ ನಿವೃತ್ತಿ ಸರ್ಕಾರಿ ನೌಕರರಿಗೆ ಅಥವಾ ಮೃತ ಸರ್ಕಾರಿ ನೌಕರರ ಫಲಾನುಭವಿಗೆ ಒದಗುವ ಆರ್ಥಿಕ ಸೌಲಭ್ಯಗಳು ದಿನಾಂಕ 1-1-1994 ರಿಂದ ಲಭಿಸುತ್ತದೆ.

## 9. ಇತರ ವಿಷಯಗಳು

9.1 ಮನೆ ಬಾಡಿಗೆ ಭತ್ಯೆ, ನಗರ ಪರಿಹಾರ ಭತ್ಯೆ ಮತ್ತು ಮುಂಗಡಗಳ ಪಾವತಿಯ ಕ್ರಮಬದ್ಧಗೊಳಿಸುವಿಕೆ ಪ್ರಸಕ್ತ ಚಾಲ್ತಿಯಲ್ಲಿರುವ ಆದೇಶಗಳಂತೆ ಮುಂದುವರೆಯುತ್ತದೆ.

9.2 1994ರ ಜನವರಿ 1 ರಿಂದ 1994ರ ಮಾರ್ಚ್ 31 ರವರೆಗೆ ಸಂಬಂಧಿಸಿದ ವೇತನ ಮತ್ತು ಭತ್ಯೆಗಳಲ್ಲಿನ ಹೆಚ್ಚಳವನ್ನು ರೂ.100 ರ ಗುಣಕಗಳಲ್ಲಿ ರಾಷ್ಟ್ರೀಯ ಉಳಿತಾಯ ಪ್ರಮಾಣಪತ್ರದ VIIIನೇ ಮಾಲಿಕೆಯಲ್ಲಿ ತೊಡಗಿಸತಕ್ಕುದು. ಉಳಿದ ಮೊಬಲಗನ್ನು ನಗದು ರೂಪದಲ್ಲಿ ಸಂದಾಯ ಮಾಡಲಾಗುವುದು.

9.3 ಕರ್ನಾಟಕ ಸರ್ಕಾರೀ ನೌಕರರ (ಕಡ್ಡಾಯ ಜೀವ ವಿಮೆ) ನಿಯಮಗಳು, 1958ರ ಮೇರೆಗೆ ವಿಮಾ ಕಂತಿನ ಕನಿಷ್ಠ ದರಗಳನ್ನು ಸಹ, ಪರಿಷ್ಕೃತ ವೇತನ ಶ್ರೇಣಿಯ ಸರಾಸರಿಯ ಶೇಕಡಾ ಆರೂ ಕಾಲು (ಶೇ. 6 $\frac{1}{4}$ ) ಆಗಿರುವಂತೆ 1994ರ ಏಪ್ರಿಲ್ 1 ರಿಂದ ಜಾರಿಗೆ ಬರುವಂತೆ ಪರಿಷ್ಕರಿಸಲಾಗಿದೆ.

9.4 ಪ್ರಯಾಣ ಭತ್ಯೆಗೆ ಅರ್ಹತೆಯನ್ನು, ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 5 ಎಸ್‌ಆರ್‌ಎಸ್ 94 ದಿನಾಂಕ 28–3–1994 ರ ವರ್ಗೀಕರಣದ ಮೇರೆಗೆ ನಿರ್ಧರಿಸುವುದು.

9.5 ಈ ನಿಯಮಗಳನ್ನು/ಆದೇಶಗಳನ್ನು ಕಾರ್ಯಗತಗೊಳಿಸುವಲ್ಲಿ ಯಾವುದೇ ಸಮಸ್ಯೆಗಳಿದ್ದರೆ ಅಥವಾ ಯಾವುದೇ ಸಂದೇಹಗಳಿಗೆ ಸ್ಪಷ್ಟೀಕರಣದ ಅವಶ್ಯಕತೆ ಕಂಡುಬಂದರೆ, ಅವುಗಳನ್ನು ಸರ್ಕಾರದ ಹಣಕಾಸು ಇಲಾಖೆಗೆ ಕಳುಹಿಸಿಕೊಡಬಹುದು.

**10. ಅನುದಾನ ಪಡೆಯುವ ಶಿಕ್ಷಣ ಸಂಸ್ಥೆಗಳ ಸೌಕರರಿಗೆ ಮತ್ತು ವಿಶ್ವವಿದ್ಯಾಲಯಗಳ ಬೋಧಕೇತರ ಸಿಬ್ಬಂದಿಗೆ ಪರಿಷ್ಕೃತ ವೇತನ ಶ್ರೇಣಿಗಳ ಪ್ರಯೋಜನಗಳ ವಿಸ್ತರಣೆ**

10.1 ಪರಿಷ್ಕೃತ ವೇತನ ಶ್ರೇಣಿಗಳ ಪ್ರಯೋಜನವನ್ನು ಅನುದಾನ ಪಡೆಯುವ ಶಿಕ್ಷಣ ಸಂಸ್ಥೆಗಳ ರಾಜ್ಯ ವೇತನ ಶ್ರೇಣಿಗಳಲ್ಲಿರುವ ನೌಕರರಿಗೆ ಹಾಗೂ ವಿಶ್ವವಿದ್ಯಾಲಯಗಳ ಬೋಧಕೇತರ ಸಿಬ್ಬಂದಿಗೆ ಮತ್ತು ಸ್ಥಳೀಯ ಸಂಸ್ಥೆಗಳ ನೌಕರರಿಗೆ ವಿಸ್ತರಿಸಲಾಗುವುದು. ಈ ಸಂಬಂಧದಲ್ಲಿ ಆದೇಶಗಳನ್ನು ಸಂಬಂಧಪಟ್ಟ ಆಡಳಿತ ಇಲಾಖೆಗಳು ಪ್ರತ್ಯೇಕವಾಗಿ ಹೊರಡಿಸುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

ಶಮಿಮ್ ಬಾನು
ಸರ್ಕಾರದ ಕಾರ್ಯದರ್ಶಿ–2,
ಆರ್ಥಿಕ ಇಲಾಖೆ.

ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 12 ಎಸ್‌ಆರ್‌ಪಿ 94

ದಿನಾಂಕ 28ನೇ ಮಾರ್ಚ್ 1994ಕ್ಕೆ ಅನುಬಂಧ–I

ಉದಾಹರಣೆ–1

ವಿವರಗಳು

| | | |
|---|---|---|
| 1. 1993ರ ಜುಲೈ 1ನೆಯ ದಿನಾಂಕದಂದು ಧಾರಣ ಮಾಡಿದ ಹುದ್ದೆಯ ಪದನಾಮ | – | ಪ್ರಾಥಮಿಕ ಶಾಲಾ ಶಿಕ್ಷಕ |
| 2. ಪ್ರಸಕ್ತ ವೇತನ ಶ್ರೇಣಿ | – | ರೂ. 1040–20–1100–30–1400–40–1800–50–1900 |
| 3. 1993ನೇ ಜುಲೈ 1 ರಂದು ಇದ್ದಂತೆ ಪ್ರಸಕ್ತ ವೇತನ ಶ್ರೇಣಿಯ ಮೂಲ ವೇತನ | – | ರೂ. 1160 |
| 4. ಪ್ರಸಕ್ತ ವೇತನ ಶ್ರೇಣಿಯಲ್ಲಿ ಮುಂದಿನ ವೇತನ ಬಡ್ತಿಯ ದಿನಾಂಕ | – | 1994ನೇ ಜನವರಿ 1ನೇ ದಿನಾಂಕ |

ಪರಿಷ್ಕೃತ ಶ್ರೇಣಿಯಲ್ಲಿ ವೇತನ ನಿಗದಿ

| | | |
|---|---|---|
| 1. ಹುದ್ದೆಗೆ ಅನ್ವಯವಾಗುವ ಪರಿಷ್ಕೃತ ವೇತನ ಶ್ರೇಣಿ | – | ರೂ. 1130–30–1400–40–1800–50–2100 |
| 2. 1993ನೇ ಜುಲೈ 1 ರಂದು ಜಾರಿಗೆ ಬರುವಂತೆ ಪರಿಷ್ಕೃತ ವೇತನ ಶ್ರೇಣಿಯಲ್ಲಿ ಕಾಲ್ಪನಿಕವಾಗಿ, ನಿಗದಿಪಡಿಸಬೇಕಾದ ಮೂಲವೇತನ | – | ರೂ. 1250 |
| 3. 1994ನೇ ಜನವರಿ 1 ರಂದು ಇದ್ದಂತೆ ಪ್ರಸಕ್ತ ವೇತನ ಶ್ರೇಣಿಯಲ್ಲಿನ ವೇತನ ಬಡ್ತಿಯನ್ನು ಆಧರಿಸಿ ಪರಿಷ್ಕೃತ ವೇತನ ಶ್ರೇಣಿಯಲ್ಲಿ ಪುನಃ ನಿಗದಿಪಡಿಸಲಾಗುವ ಮೂಲ ವೇತನ | – | ರೂ. 1280 |
| 4. ಮುಂದಿನ ವೇತನ ಬಡ್ತಿಯ ದಿನಾಂಕ | – | 1995ನೇ ಜವವರಿ 1 |

ಉದಾಹರಣೆ–2

**ವಿವರಗಳು**

| | | |
|---|---|---|
| 1. | 1993ನೇ ಜುಲೈ 1 ರಂದು ಧಾರಣ ಮಾಡಿದ ಹುದ್ದೆಯ ಪದನಾಮ | – ಪ್ರೌಢಶಾಲಾ ಮುಖ್ಯೋಪಾಧ್ಯಾಯರು |
| 2. | ಪ್ರಸಕ್ತ ವೇತನ ಶ್ರೇಣಿ | – ರೂ. 1900–50–2300–75–2900–90–3350–100–3650 |
| 3. | 1993ನೇ ಜುಲೈ 1 ರಂದು ಇದ್ದಂತೆ ಪ್ರಸಕ್ತ ವೇತನ ಶ್ರೇಣಿಯಲ್ಲಿ ಮೂಲವೇತನ | – ರೂ. 2525 |
| 4. | ಪ್ರಸಕ್ತ ವೇತನ ಶ್ರೇಣಿಯಲ್ಲಿ ವೇತನ ಬಡ್ತಿ | – 1993ನೇ ಆಗಸ್ಟ್ 1 |

**ಪರಿಷ್ಕೃತ ವೇತನ ಶ್ರೇಣಿಯಲ್ಲಿ ವೇತನ ನಿಗದಿ**

| | | |
|---|---|---|
| 1. | ಹುದ್ದೆಗೆ ಅನ್ವಯವಾಗುವ ಪರಿಷ್ಕೃತ ವೇತನ ಶ್ರೇಣಿ | – ರೂ. 2050–50–2300–75–2900–100–3700–125–3950 |
| 2. | 1993ನೇ ಜುಲೈ 1ರಿಂದ ಜಾರಿಗೆ ಬರುವಂತೆ ಪರಿಷ್ಕೃತ ಶ್ರೇಣಿಯಲ್ಲಿ ಕಾಲ್ಪನಿಕವಾಗಿ ನಿಗದಿಪಡಿಸಬೇಕಾದ ಮೂಲ ವೇತನ | – ರೂ. 2750 |
| 3. | ಪ್ರಸಕ್ತ ವೇತನ ಶ್ರೇಣಿಯಲ್ಲಿ ಅಂದರೆ 1993ನೇ ಆಗಸ್ಟ್ 1 ರಂದು ಇದ್ದಂತೆ ರೂ. 2600 ವೇತನ ಬಡ್ತಿಯನ್ನು ಆಧರಿಸಿ ಪರಿಷ್ಕೃತ ವೇತನ ಶ್ರೇಣಿಯಲ್ಲಿ ಕಾಲ್ಪನಿಕವಾಗಿ ಪುನಃ ನಿಗದಿಪಡಿಸ ಬೇಕಾದ ವೇತನ | – ರೂ. 2825 |
| 4. | ಮುಂದಿ ವೇತನ ಬಡ್ತಿಯ ದಿನಾಂಕ | – 1994ನೇ ಆಗಸ್ಟ್ 1 |

ಉದಾಹರಣೆ–3

**ವಿವರಗಳು**

| | | | |
|---|---|---|---|
| 1. | 1993ನೇ ಜುಲೈ 1 ರಂದು ಧಾರಣ ಮಾಡಿದ್ದ ಹುದ್ದೆಯ ಪದನಾಮ | – | ಜೂನಿಯರ್ ಎಂಜಿನಿಯರು (ಪಿ.ಡಬ್ಲ್ಯೂಡಿ) |
| 2. | ಪ್ರಸಕ್ತ ವೇತನ ಶ್ರೇಣಿ | – | ರೂ. 1400–40–1800–50–2300–75–2750 |
| 3. | 1993ನೇ ಜುಲೈ 1 ರಂದು ಇದ್ದಂತೆ ಪ್ರಸಕ್ತ ವೇತನ ಶ್ರೇಣಿಯಲ್ಲಿನ ಮೂಲವೇತನ | – | ರೂ. 1600 |
| 4. | ಪ್ರಸಕ್ತ ವೇತನ ಶ್ರೇಣಿಯಲ್ಲಿ ಮುಂದಿನ ವೇತನ ಬಡ್ತಿಯ ದಿನಾಂಕ | – | 1994ನೇ ಜುಲೈ 1 |

**ಪರಿಷ್ಕೃತ ಶ್ರೇಣಿಯಲ್ಲಿ ವೇತನದ ನಿಗದಿ**

| | | | |
|---|---|---|---|
| 1. | ಹುದ್ದೆಗೆ ಅನ್ವಯವಾಗುವ ಪರಿಷ್ಕೃತ ವೇತನ ಶ್ರೇಣಿ | – | ರೂ. 1520–40–1800–50–2300–75–2900 |
| 2. | 1993ನೇ ಜುಲೈ 1 ರಿಂದ ಜಾರಿಗೆ ಬರುವಂತೆ ಪರಿಷ್ಕೃತ ವೇತನ ಶ್ರೇಣಿಯಲ್ಲಿ ಕಾಲ್ಪನಿಕವಾಗಿ ನಿಗದಿಪಡಿಸಬೇಕಾದ ಮೂಲ ವೇತನ | – | ರೂ. 1760 |
| 3. | ಪರಿಷ್ಕೃತ ವೇತನ ಶ್ರೇಣಿಯಲ್ಲಿ ಮುಂದಿನ ವೇತನ ಬಡ್ತಿ ದಿನಾಂಕ | – | 1994ನೇ ಜುಲೈ 1 |

ಉದಾಹರಣೆ–4

**ವಿವರಗಳು**

| | | | |
|---|---|---|---|
| 1. | 1993ನೇ ಜುಲೈ 1 ರಂದು ಧಾರಣ ಮಾಡಿದ ಹುದ್ದೆಯ ಪದನಾಮ | – | ಜಿಲ್ಲಾ ನ್ಯಾಯಾಧೀಶರು |
| 2. | ಪ್ರಸಕ್ತ ವೇತನ ಶ್ರೇಣಿ | – | ರೂ. 4550–125–5300–150–5600 |

| | | |
|---|---|---|
| 3. 1993ನೇ ಜುಲೈ 1 ರಂದು ಇದ್ದಂತೆ ಪ್ರಸಕ್ತ ವೇತನ ಶ್ರೇಣಿಯಲ್ಲಿನ ಮೂಲವೇತನ | – | ರೂ. 5600 ಮತ್ತು ರೂ. 150 ವೈಯಕ್ತಿಕ ವೇತನ (ಮೊದಲನೇ ಸ್ಥಗಿತ ವೇತನ ಬಡ್ತಿ) |
| 4. ಪ್ರಸಕ್ತ ವೇತನ ಶ್ರೇಣಿಯಲ್ಲಿ ಮುಂದಿನ ವೇತನ ಬಡ್ತಿಯ ದಿನಾಂಕ | – | ಈಗಿನ ಕಾಲಿಕ ವೇತನ ಶ್ರೇಣಿಯಲ್ಲಿ ಯಾವುದೇ ವಾರ್ಷಿಕ ವೇತನ ಬಡ್ತಿ ಇಲ್ಲ, ಎರಡನೇ ಸ್ಥಗಿತ ವೇತನ ಬಡ್ತಿ ನೀಡಬೇಕಾದ ದಿನಾಂಕ 1994ನೇ ಜುಲೈ 1 |

### ಪರಿಷ್ಕೃತ ಶ್ರೇಣಿಯಲ್ಲಿ ವೇತನ ನಿಗದಿ

| | | |
|---|---|---|
| 1. ಹುದ್ದೆಗೆ ಅನ್ವಯವಾಗುವ ಪರಿಷ್ಕೃತ ವೇತನ ಶ್ರೇಣಿ | – | ರೂ. 4700–150–5300–175–6000–200–6400 |
| 2. 1993ನೇ ಜುಲೈ 1 ರಿಂದ ಜಾರಿಗೆ ಬರುವಂತೆ ಪರಿಷ್ಕೃತ ವೇತನ ಶ್ರೇಣಿಯಲ್ಲಿ ಕಾಲ್ಪನಿಕವಾಗಿ ನಿಗದಿ ಪಡಿಸಬೇಕಾದ ಮೂಲವೇತನ | – | ರೂ. 6200 |
| 3. ಪರಿಷ್ಕೃತ ವೇತನ ಶ್ರೇಣಿಯಲ್ಲಿ ಮುಂದಿನ ವೇತನ ಬಡ್ತಿ | – | 1994ನೇ ಜುಲೈ 1 (1994ನೇ ಜುಲೈ 1 ರಂದು ಕೊಡಬೇಕಾದ ವಾರ್ಷಿಕ ವೇತನ ಬಡ್ತಿಯಿಂದ ವೇತನ ರೂ. 6400 ಕ್ಕೆ ಏರುತ್ತದೆ. ಯಾವುದೇ ಪುನರ್ ನಿಗದೀಕರಣ ವನ್ನು ಅನುಮತಿಸಲಾಗುವುದಿಲ್ಲ). |

### ಉದಾಹರಣೆ–5

### ವಿವರಗಳು

| | | |
|---|---|---|
| 1. 1993ನೇ ಜುಲೈ 1 ರಂದು ಹೊಂದಿದ ಹುದ್ದೆಯ ಪದನಾಮ | – | ಪಶುವೈದ್ಯಾಧಿಕಾರಿ |

| | | |
|---|---|---|
| 2. | ಪ್ರಸಕ್ತ ವೇತನ ಶ್ರೇಣಿ | – ರೂ. 2000–50–2300–75–2900–90–3350–100–3750 |
| 3. | 1993ನೇ ಜುಲೈ 1 ರಂದು ಇದ್ದಂತೆ ಪ್ರಸಕ್ತ ವೇತನ ಶ್ರೇಣಿಯಲ್ಲಿನ ಮೂಲ ವೇತನ | – ರೂ. 3750 (1–1–1992 ರಂದು ಪ್ರಸಕ್ತ ಶ್ರೇಣಿಯ ಗರಿಷ್ಠ ಮಟ್ಟ ವನ್ನು ಮುಟ್ಟಿದೆ) |
| 4. | ಪ್ರಸಕ್ತ ವೇತನ ಶ್ರೇಣಿಯಲ್ಲಿ ಮುಂದಿನ ವೇತನ ಬಡ್ತಿಯ ದಿನಾಂಕ | – ಪ್ರಸಕ್ತ ಕಾಲಿಕ ವೇತನ ಶ್ರೇಣಿಯಲ್ಲಿ ಯಾವುದೇ ವೇತನ ಬಡ್ತಿ ಕೊಡ ಬೇಕಾಗಿಲ್ಲ. ಆದರೆ 1994ನೇ ಜನವರಿ 1ರಂದು ಸ್ಥಗಿತ ವೇತನ ಬಡ್ತಿಗೆ ಅರ್ಹತೆ ಇದೆ. |

### ಪರಿಷ್ಕೃತ ಶ್ರೇಣಿಯಲ್ಲಿ ವೇತನದ ನಿಗದಿ

| | | |
|---|---|---|
| 1. | ಹುದ್ದೆಗೆ ಅನ್ವಯವಾಗುವ ಪರಿಷ್ಕೃತ ವೇತನ ಶ್ರೇಣಿ | – ರೂ. 2150–50–2300–75–2900–100–3700–125–4200 |
| 2. | 1993ನೇ ಜುಲೈ 1 ರಂದು ಜಾರಿಗೆ ಬರುವಂತೆ ಪರಿಷ್ಕೃತ ವೇತನ ಶ್ರೇಣಿಯಲ್ಲಿ ಕಾಲ್ಪನಿಕವಾಗಿ ನಿಗದಿ ಪಡಿಸಬೇಕಾದ ಮೂಲವೇತನ | – ರೂ. 4075 |
| 3. | 1994ನೇ ಜನವರಿ 1 ರಂದು ಪ್ರಸಕ್ತ ಶ್ರೇಣಿಯಲ್ಲಿ (3750+100 ರೂಪಾಯಿ ಗಳು) ಕೊಡಬೇಕಾಗಿದ್ದ ಸ್ಥಗಿತ ವೇತನ ಬಡ್ತಿಯನ್ನು ಆಧರಿಸಿ ಪುನರ್ ನಿಗದಿಗೊಳಿಸಬೇಕಾದ ವೇತನ | – ರೂ. 4200 |
| 4. | ಪರಿಷ್ಕೃತ ವೇತನ ಶ್ರೇಣಿಯಲ್ಲಿ ಎರಡನೇ ಸ್ಥಗಿತ ವೇತನ ಬಡ್ತಿ | – 1996ನೇ ಜನವರಿ 1 |

ಉದಾಹರಣೆ–6

**ವಿವರಗಳು**

| | | |
|---|---|---|
| 1. 1993ನೇ ಜುಲೈ 1 ರಂದು ಧಾರಣ ಮಾಡಿದ ಪ್ರಸಕ್ತ ಹುದ್ದೆಯ ಪದನಾಮ | – | ಪ್ರೌಢಶಾಲಾ ಸಹಾಯಕ ದರ್ಜೆ 2 (ತರಬೇತಿ ಪಡೆದ) |
| 2. ಹುದ್ದೆಗೆ ಅನ್ವಯವಾಗುವ ಪ್ರಸಕ್ತ ವೇತನ ಶ್ರೇಣಿ | – | ರೂ. 1400–40–1800–50–2300–75–2750 |
| 3. 1–4–1991 ರಿಂದ ಜಾರಿಗೆ ಬರುವಂತೆ ಕಾಲಬದ್ಧ ಬಡ್ತಿ ಯೋಜನೆ ಮೇರೆಗೆ ಅನುಮತಿಸಲಾದ ಆಯ್ಕೆ ಕಾಲಿಕ ವೇತನ ಶ್ರೇಣಿ | – | ರೂ. 1600–40–1800–50–2300–75–2990 |
| 4. 1993ನೇ ಜುಲೈ 1 ರಂದು ಇದ್ದಂತೆ ಆಯ್ಕೆ ಕಾಲಿಕ ವೇತನ ಶ್ರೇಣಿಯಲ್ಲಿ ಪಡೆದ ಮೂಲ ವೇತನ | – | ರೂ. 2600 |
| 5. ಆಯ್ಕೆ ಕಾಲಿಕ ವೇತನ ಶ್ರೇಣಿಯಲ್ಲಿ ಮುಂದಿನ ವೇತನ ಬಡ್ತಿಯ ದಿನಾಂಕ | – | 1994ನೇ ಏಪ್ರಿಲ್ 1 |

**ಪರಿಷ್ಕೃತ ವೇತನ ಶ್ರೇಣಿಯಲ್ಲಿ ವೇತನ ನಿಗದಿ**

| | | |
|---|---|---|
| 1. ಹುದ್ದೆಗೆ ಅನ್ವಯವಾಗುವ ಪರಿಷ್ಕೃತ ವೇತನ ಶ್ರೇಣಿ | – | ರೂ. 1520–40–1800–50–2300–75–2900 |
| 2. ಪರಿಷ್ಕೃತ ವೇತನ ಶ್ರೇಣಿಯಲ್ಲಿ ಆಯ್ಕೆ ಕಾಲಿಕ ವೇತನ ಶ್ರೇಣಿ | – | ರೂ. 1720–40–1800–50–2300–75–2900–100–3300 (ಆಯ್ಕೆ ಕಾಲಿಕ ವೇತನ ಶ್ರೇಣಿ) |
| 3. 1993ನೇ ಜುಲೈ 1 ರಂದು ಜಾರಿಗೆ ಬರುವಂತೆ ಪರಿಷ್ಕೃತ, ಆಯ್ಕೆ ಕಾಲಿಕ ವೇತನ ಶ್ರೇಣಿಯಲ್ಲಿ ಕಾಲ್ಪನಿಕವಾಗಿ ನಿಗದಿಪಡಿಸಬೇಕಾದ ವೇತನ | – | ರೂ. 2825 |

3

4. 1994ನೇ ಏಪ್ರಿಲ್ 1ರಂದು ವೇತನದ ಪುನರ್ ನಿಗದೀಕರಣ – ರೂ. 2900
5. ಮುಂದಿನ ವೇತನ ಬಡ್ತಿಯ ದಿನಾಂಕ – 1995ನೇ ಏಪ್ರಿಲ್ 1

ಉದಾಹರಣೆ–7

**ವಿವರಗಳು**

1. ಪ್ರಸಕ್ತ ಹುದ್ದೆಯ ಪದನಾಮ – ಅರಣ್ಯ ರಕ್ಷಕ
2. ಹುದ್ದೆಗೆ ಅನ್ವಯವಾಗುವ ಪ್ರಸಕ್ತ ವೇತನ ಶ್ರೇಣಿ – ರೂ. 960–20–1100–30–1400–40–1760
3. 1993ನೇ ಜುಲೈ 1 ರಂದು ಇದ್ದಂತೆ ಪ್ರಸಕ್ತ ವೇತನ ಶ್ರೇಣಿಯಲ್ಲಿ ಮೂಲ ವೇತನ – ರೂ. 1190
4. ಪ್ರಸಕ್ತ ವೇತನ ಶ್ರೇಣಿಯಲ್ಲಿ ಮುಂದಿನ ವೇತನ ಬಡ್ತಿಯ ದಿನಾಂಕ – 1994ನೇ ಜೂನ್ 1

**ಪರಿಷ್ಕೃತ ವೇತನ ಶ್ರೇಣಿಯಲ್ಲಿ ವೇತನ ನಿಗದಿ**

1. ಹುದ್ದೆಗೆ ಅನ್ವಯವಾಗುವ ಪರಿಷ್ಕೃತ ವೇತನ ಶ್ರೇಣಿ – ರೂ. 1040–20–1100–30–1400–40–1800–50–1900
2. 1993ನೇ ಜುಲೈ 1 ರಂದು ಜಾರಿಗೆ ಬರುವಂತೆ ಪರಿಷ್ಕೃತ ವೇತನ ಶ್ರೇಣಿಯಲ್ಲಿ ಕಾಲ್ಪನಿಕವಾಗಿ ನಿಗದಿ ಪಡಿಸಬೇಕಾದ ಮೂಲ ವೇತನ – ರೂ. 1280
3. 1994ನೇ ಜೂನ್ 1 ರಂದು ಇದ್ದಂತೆ ಪ್ರಸಕ್ತ ವೇತನ ಶ್ರೇಣಿಯಲ್ಲಿ (ರೂ. 1190+30) ಕೊಡಬೇಕಾದ ವೇತನ ಬಡ್ತಿಯನ್ನು ಆಧರಿಸಿ ಪರಿಷ್ಕೃತ ವೇತನ ಶ್ರೇಣಿಯಲ್ಲಿ ವೇತನದ ಪುನರ್ ನಿಗದೀಕರಣ – ರೂ. 1340

4. ಪರಿಷ್ಕೃತ ವೇತನ ಶ್ರೇಣಿಯಲ್ಲಿ ಮುಂದಿನ ವೇತನ ಬಡ್ತಿಯ ದಿನಾಂಕ – 1995ನೇ ಜೂನ್ 1

ಉದಾಹರಣೆ–8

**ವಿವರಗಳು**

1. 1993ನೇ ಜುಲೈ 1 ರಂದು ಧಾರಣ ಮಾಡಿದ ಪ್ರಸಕ್ತ ಹುದ್ದೆಯ ಪದನಾಮ – ಅಟೆಂಡರ್/ಜಮೇದಾರ್
2. ಹುದ್ದೆಗೆ ಅನ್ವಯವಾಗುವ ಪ್ರಸಕ್ತ ವೇತನ ಶ್ರೇಣಿ – ರೂ. 810–15–900–20–1100–30–1310
3. 1993ನೇ ಜುಲೈ 1 ರಂದು ಇದ್ದಂತೆ ಪ್ರಸಕ್ತ ವೇತನ ಶ್ರೇಣಿಯಲ್ಲಿ ಪಡೆದ ಮೂಲ ವೇತನ – ರೂ. 1310 (1–1–1993 ರಂದು ಶ್ರೇಣಿಯ ಗರಿಷ್ಠ ಮಟ್ಟ ಮುಟ್ಟಿರುವ)
4. ಪ್ರಸಕ್ತ ವೇತನ ಶ್ರೇಣಿಯಲ್ಲಿ ಮುಂದಿನ ವೇತನ ಬಡ್ತಿಯ ದಿನಾಂಕ – ಪ್ರಸಕ್ತ ಕಾಲಿಕ ವೇತನ ಶ್ರೇಣಿಯಲ್ಲಿ ಯಾವುದೇ ವೇತನ ಬಡ್ತಿ ಕೊಡಬೇಕಾಗಿಲ್ಲ. 1ನೇ ಜನವರಿ 1995 ರಂದು ಸ್ಥಗಿತ ವೇತನ ಬಡ್ತಿ ಕೊಡಬೇಕು.

**ಪುಷ್ಕೃತ ಶ್ರೇಣಿಯಲ್ಲಿ ವೇತನ ನಿಗದಿ**

1. ಹುದ್ದೆಗೆ ಅನ್ವಯವಾಗುವ ಪರಿಷ್ಕೃತ ವೇತನ ಶ್ರೇಣಿ – ರೂ. 870–15–900–20–1100–30–1400–40–1520
2. 1993ನೇ ಜುಲೈ 1 ರಂದು ಜಾರಿಗೆ ಬರುವಂತೆ ಪರಿಷ್ಕೃತ ವೇತನ ಶ್ರೇಣಿಯಲ್ಲಿ ಕಾಲ್ಪನಿಕವಾಗಿ ನಿಗದಿ ಪಡಿಸಬೇಕಾದ ಮೂಲ ವೇತನ – ರೂ. 1440
3. ಪರಿಷ್ಕೃತ ವೇತನ ಶ್ರೇಣಿಯಲ್ಲಿ ಮುಂದಿನ ವೇತನ ಬಡ್ತಿಯ ದಿನಾಂಕ – 1994ರ ಜುಲೈ 1 (1–1–1995 ರಂದು ಯಾವುದೇ ಸ್ಥಗಿತ ವೇತನ ಬಡ್ತಿ ದೊರೆಯುವುದಿಲ್ಲ)

3*

## ಉದಾಹರಣೆ–9

### ವಿವರಗಳು

| | | | |
|---|---|---|---|
| 1. | 1993ರ ಜುಲೈ 1ರಂದು ಧಾರಣ ಮಾಡಿದ್ದ ಪ್ರಸಕ್ತ ಹುದ್ದೆಯ ಪದನಾಮ | ... | ಅಂಕಿಅಂಶಗಳ ಇಲಾಖೆಯ ಜಂಟಿ ನಿರ್ದೇಶಕರು |
| 2. | ಹುದ್ದೆಯ ಅನ್ವಯವಾಗುವ ಪ್ರಸಕ್ತ ವೇತನ ಶ್ರೇಣಿ | ... | ರೂ. 3650–100–3950–120–4550 |
| 3. | 1993ರ ಜುಲೈ 1ರಂದು ಇದ್ದಂತೆ ಪ್ರಸಕ್ತ ವೇತನ ಶ್ರೇಣಿಯಲ್ಲಿ ಮೂಲವೇತನ | ... | ರೂ. 4550+120 ವೈಯಕ್ತಿಕ ವೇತನ (ಸ್ಥಗಿತ ವೇತನ ಬಡ್ತಿ) |
| 4. | ಪ್ರಸಕ್ತ ವೇತನ ಶ್ರೇಣಿಯಲ್ಲಿ ಮುಂದಿನ ವೇತನ ಬಡ್ತಿಯ ದಿನಾಂಕ | ... | ಪ್ರಸಕ್ತ ಕಾಲಿಕ ವೇತನ ಶ್ರೇಣಿಯಲ್ಲಿ ಯಾವುದೇ ಸಾಮಾನ್ಯ ವೇತನ ಬಡ್ತಿ ಇಲ್ಲ.<br>ಎರಡನೇ ಸ್ಥಗಿತ ವೇತನ ಬಡ್ತಿ 1.8.1994 ರಂದು ಕೊಡಬೇಕಾಗಿದೆ. |

### ಪರಿಷ್ಕೃತ ವೇತನ ಶ್ರೇಣಿಯಲ್ಲಿ ವೇತನ ನಿಗದಿ

| | | | |
|---|---|---|---|
| 1. | ಹುದ್ದೆಗೆ ಅನ್ವಯವಾಗುವ ಪರಿಷ್ಕೃತ ವೇತನ ಶ್ರೇಣಿ | ... | ರೂ. 3825–125–4700–150–5300–175–5825 |
| 2. | 1993ರ ಜುಲೈ 1 ರಿಂದ ಜಾರಿಗೆ ಬರುವಂತೆ ಪರಿಷ್ಕೃತ ವೇತನ ಶ್ರೇಣಿಯಲ್ಲಿ ಕಾಲ್ಪನಿಕವಾಗಿ ನಿಗದಿಪಡಿಸಬೇಕಾದ ವೇತನ | ... | ರೂ. 5150 |
| 3. | ಪರಿಷ್ಕೃತ ಶ್ರೇಣಿಯಲ್ಲಿ ಮುಂದಿನ ವೇತನ ಬಡ್ತಿ | ... | 1994ರ ಜುಲೈ 1 (1994ರ ಆಗಸ್ಟ್ 1 ರಂದು ಯಾವುದೇ ಸ್ಥಗಿತ ವೇತನ ಬಡ್ತಿ ದೊರೆಯುವುದಿಲ್ಲ). |

## ಉದಾಹರಣೆ-10

### ವಿವರಗಳು

| | | |
|---|---|---|
| 1. 1993ರ ಜುಲೈ 1ರಂದು ಧಾರಣ ಮಾಡಿದ್ದ ಪ್ರಸಕ್ತ ಹುದ್ದೆಯ ಪದನಾಮ | ... | ಎರಡನೇ ದರ್ಜೆಯ ಸಹಾಯಕ |
| 2. ಹುದ್ದೆಯ ಅನ್ವಯವಾಗುವ ಪ್ರಸಕ್ತ ವೇತನ ಶ್ರೇಣಿ | .. | 1987ರ ರೂ. 960-20-1100-30-1400-40-1760 ವೇತನ ಶ್ರೇಣಿಯಲ್ಲಿ 1993ರ ಜುಲೈ 1 ರಿಂದ ಜಾರಿಗೆ ಬರುವಂತೆ ನೇಮಕ ಹೊಂದಿದ. |
| 3. 1993ರ ಜುಲೈ 1ರಂದು ಇದ್ದಂತೆ 1987ರ ವೇತನ ಶ್ರೇಣಿಯಲ್ಲಿ ಪಡೆದ ಮೂಲ ವೇತನ | ... | ರೂ. 960 |
| 4. ಮುಂದಿನ ವೇತನ ಬಡ್ತಿಯ ದಿನಾಂಕ: | ... | 1994ರ ಜುಲೈ 1 |

### ಪರಿಷ್ಕೃತ ವೇತನ ಶ್ರೇಣಿಯಲ್ಲಿ ವೇತನ

| | | |
|---|---|---|
| 1: ಹುದ್ದೆಗೆ ಅನ್ವಯವಾಗುವ ಪರಿಷ್ಕೃತ ವೇತನ ಶ್ರೇಣಿ | ... | ರೂ.1040-20-1100-30-1400-40-1800-50-1900 |
| 2. 1993ರ ಜುಲೈ 1 ರಿಂದ ಜಾರಿಗೆ ಬರುವಂತೆ ಪರಿಷ್ಕೃತ ವೇತನ ಶ್ರೇಣಿಯಲ್ಲಿ ಕಾಲ್ಪನಿಕವಾಗಿ ಅನುಮತಿಸಬೇಕಾದ ಮೂಲ ವೇತನ | ... | ರೂ. 1040 |
| 3. ಪರಿಷ್ಕೃತ ವೇತನ ಶ್ರೇಣಿಯಲ್ಲಿ ಮುಂದಿನ ವೇತನ ಬಡ್ತಿಯ ದಿನಾಂಕ | ... | 1994ರ ಜುಲೈ 1 |

## ಉದಾಹರಣೆ–11

### ವಿವರಗಳು

1987ರ ರೂ. 1600–40–1800–50–2300–75–2900–90–2990ರ ವೇತನ ಶ್ರೇಣಿಯಲ್ಲಿ 1900 ರೂ. ಮೂಲವೇತನ ಪಡೆಯುತ್ತಿದ್ದ ಶ್ರೀ "ಎ" ಹಿರಿಯ ಸಹಾಯಕರಿಗೆ 1987ರ ರೂ. 1900–50–2300–75–2900–90–3350–100–3650 ವೇತನ ಶ್ರೇಣಿಯಲ್ಲಿ 1993ರ ಮೇ 1 ರಿಂದ ಜಾರಿಗೆ ಬರುವಂತೆ ಶಾಖಾಧಿಕಾರಿಯಾಗಿ ಬಡ್ತಿ ನೀಡಲಾಯಿತು. ಬಡ್ತಿ ನೀಡಿದ ಮೇಲೆ ಅವನ ವೇತನವನ್ನು 1993ರ ಮೇ 1 ರಿಂದ 1950 ರೂ.ಗೆ ನಿಗದಿಪಡಿಸಲಾಯಿತು. ಅವರ ಕೆಳಗಿನ ಹುದ್ದೆಯಾದ ಹಿರಿಯ ಸಹಾಯಕರ ಹುದ್ದೆಯಲ್ಲಿ ಅವರ ಮುಂದಿನ ವೇತನ ಬಡ್ತಿ 1994ರ ಮಾರ್ಚ್ ಒಂದರಂದು ದೊರೆಯಬೇಕಾಗಿತ್ತು.

| | | |
|---|---|---|
| 1. | 1993ರ ಜುಲೈ 1 ರಂದು ಧಾರಣ ಮಾಡಿದ್ದ ಪ್ರಸಕ್ತ ಹುದ್ದೆಯ ಪದನಾಮ | ... ಶಾಖಾಧಿಕಾರಿ |
| 2. | 1993ರ ಜುಲೈ 1 ರಂದು ಧಾರಣ ಮಾಡಿದ್ದ ಹುದ್ದೆಗೆ ಅನ್ವಯವಾಗುವ ಪ್ರಸಕ್ತ ವೇತನ ಶ್ರೇಣಿ | ... ರೂ. 1900–50–2300–75–2900–90–3350–100–3650 |
| 3. | 1993ರ ಜುಲೈ 1 ರಂದು ಇದ್ದಂತೆ ಶಾಖಾಧಿಕಾರಿಯ ಪ್ರಸಕ್ತ ವೇತನ ಶ್ರೇಣಿಯಲ್ಲಿ ಮೂಲ ವೇತನ | ... ರೂ. 1950 |
| 4. | 1993ರ ಜುಲೈ 1 ರಂದು ಧಾರಣ ಮಾಡಿದ್ದ ಶಾಖಾಧಿಕಾರಿಯ ಹುದ್ದೆಗೆ ಅನ್ವಯವಾಗುವ ಪ್ರಸಕ್ತ ವೇತನ ಶ್ರೇಣಿ | ... ರೂ. 2050–50–2300–75–2900–100–3700–125–3950 |
| 5. | 1993 ಜುಲೈ 1 ರಿಂದ ಜಾರಿಗೆ ಬರುವಂತೆ ಶಾಖಾಧಿಕಾರಿ ಹುದ್ದೆಗೆ ಅನ್ವಯವಾಗುವ ಪರಿಷ್ಕೃತ ವೇತನ ಶ್ರೇಣಿಯಲ್ಲಿ ಕಾಲ್ಪನಿಕವಾಗಿ ನಿಗದಿಪಡಿಸಬೇಕಾದ ಮೂಲ ವೇತನ | ... ರೂ. 2100 |
| 6. | 1993ರ ಜುಲೈ 1 ರಿಂದ ಜಾರಿಗೆ ಬರುವಂತೆ 1900 ರೂ. ಮೂಲ ವೇತನವನ್ನು ಆಧರಿಸಿ ಅವರ ಕೆಳಗಿನ ಹುದ್ದೆಯಾದ ಹಿರಿಯ ಸಹಾಯಕ ಹುದ್ದೆಗೆ ಅನ್ವಯವಾಗುವ ರೂ. 1720–40–1800–50–2300–75–2900–100–3300 ಪರಿಷ್ಕೃತ ವೇತನ ಶ್ರೇಣಿಯಲ್ಲಿ ಕಾಲ್ಪನಿಕವಾಗಿ ನಿಗದಿಪಡಿಸಬೇಕಾದ ಮೂಲ ವೇತನ | ... ರೂ. 2050 |

7. 1994ರ ಮಾರ್ಚ್ 1 ರಿಂದ ಜಾರಿಗೆ ಬರುವಂತೆ ಪ್ರಸಕ್ತ ವೇತನ ಶ್ರೇಣಿಯಲ್ಲಿ ಕೊಡಬೇಕಾದ ವೇತನ ಬಡ್ತಿಯನ್ನು ಆಧರಿಸಿ ಅವರ ಕೆಳಗಿನ ಹುದ್ದೆಯಾದ ಹಿರಿಯ ಸಹಾಯಕ ಹುದ್ದೆಯ ಪರಿಷ್ಕೃತ ಶ್ರೇಣಿಯಲ್ಲಿ ಪುನರ್ ನಿಗದಿಪಡಿಸಬೇಕಾದ ವೇತನ ... ರೂ. 2100

8. 1994ರ ಮಾರ್ಚ್ 1 ರಂದು ಇದ್ದಂತೆ ಅದರ ಕೆಳಗಿನ ಹುದ್ದೆಯಾದ ಹಿರಿಯ ಸಹಾಯಕ ಹುದ್ದೆಯಲ್ಲಿನ ವೇತನ ಬಡ್ತಿಯನ್ನು ಆಧರಿಸಿ ಶಾಖಾಧಿಕಾರಿಯ ಪರಿಷ್ಕೃತ ವೇತನ ಶ್ರೇಣಿಯಲ್ಲಿ ಪುನರ್ ನಿಗದಿಪಡಿಸಬೇಕಾದ ವೇತನ ... ರೂ. 2150

9. ಪರಿಷ್ಕೃತ ವೇತನ ಶ್ರೇಣಿಯಲ್ಲಿ ಮುಂದಿನ ವೇತನ ಬಡ್ತಿ ... 1995ರ ಮಾರ್ಚ್ 1

## ಉದಾಹರಣೆ-12

### ವಿವರಗಳು

1987ರ ರೂ. 810-15-900-20-1100-30-1310 ವೇತನ ಶ್ರೇಣಿಯಲ್ಲಿ 1000 ರೂ. ಮೂಲವೇತನ ಪಡೆಯುತ್ತಿದ್ದ ಶ್ರೀ "ಬಿ" ಅಟೆಂಡರ್ ಇವರಿಗೆ 1993ರ ಆಗಸ್ಟ್ 1 ರಿಂದ ಜಾರಿಗೆ ಬರುವಂತೆ ರೂ. 960-20-1100-30-1400-40-1760 ರ ಹಿರಿಯ ವೇತನ ಶ್ರೇಣಿಯನ್ನು ನೀಡಲಾಯಿತು. ರೂ. 960-1760 ರ ಹಿರಿಯ ವೇತನ ಶ್ರೇಣಿಯಲ್ಲಿ ಅವರ ವೇತನವನ್ನು, 1993ರ ಆಗಸ್ಟ್ 1 ರಿಂದ ಜಾರಿಗೆ ಬರುಂತೆ 1020 ರೂ.ಗೆ ನಿಗದಿಪಡಿಸಲಾಯಿತು. ರೂ. 810-1310 ವೇತನ ಶ್ರೇಣಿಯಲ್ಲಿ ಅವರ ಮುಂದಿನ ವೇತನ ಬಡ್ತಿಯನ್ನು 1.4.1994 ರಂದು ಕೊಡಬೇಕಾಗಿತ್ತು.

1. 1993ರ ಜುಲೈ 1 ರಂದು ಧಾರಣ ಮಾಡಿದ್ದ ಹುದ್ದೆಯ ಪ್ರಸಕ್ತ ವೇತನ ಶ್ರೇಣಿ ... ರೂ. 810-15-900-20-1100-30-1310
2. 1993ರ ಜುಲೈ 1 ರಂದು ಇದ್ದಂತೆ ಪ್ರಸಕ್ತ ವೇತನ ಶ್ರೇಣಿಯಲ್ಲಿ ಮೂಲ ವೇತನ ... ರೂ. 1000
3. 1993ರ ಆಗಸ್ಟ್ 1 ರಿಂದ ಜಾರಿಗೆ ಬರುವಂತೆ ರೂ. 960-1760 ಹಿರಿಯ ವೇತನ ಶ್ರೇಣಿಯಲ್ಲಿ ನಿಗದಿಪಡಿಸಲಾದ ವೇತನ ... ರೂ. 1020
4. ಪ್ರಸಕ್ತ ವೇತನ ಶ್ರೇಣಿಯಲ್ಲಿ ಮುಂದಿನ ವೇತನ ಬಡ್ತಿಯ ದಿನಾಂಕ ... 1994ರ ಏಪ್ರಿಲ್ 1

### ಪರಿಷ್ಕೃತ ವೇತನ ಶ್ರೇಣಿಯಲ್ಲಿ ವೇತನ ನಿಗದಿ

1. ಹುದ್ದೆಗೆ ಅನ್ವಯವಾಗುವ ಪರಿಷ್ಕೃತ ವೇತನ ಶ್ರೇಣಿ ... ರೂ. 870-15-900-20-1100-30-1400-40-1520
2. 1993ರ ಜುಲೈ 1 ರಿಂದ ಜಾರಿಗೆ ಬರುವಂತೆ ಪರಿಷ್ಕೃತ ವೇತನ ಶ್ರೇಣಿಯಲ್ಲಿ ಕಾಲ್ಪನಿಕವಾಗಿ ನಿಗದಿಪಡಿಸಬೇಕಾದ ಮೂಲ ವೇತನ ... ರೂ. 1080

| | | |
|---|---|---|
| 3. ಪರಿಷ್ಕೃತ ವೇತನ ಶ್ರೇಣಿಗಳಲ್ಲಿ ಅನ್ವಯವಾಗುವ (ಹಿರಿಯ) ವೇತನ ಶ್ರೇಣಿ | ... | ರೂ. 1040–20–1100–30–1400–40–1800–50–1900 |
| 4. 1993ರ ಆಗಸ್ಟ್ 1 ರಿಂದ ಜಾರಿಗೆ ಬರುವಂತೆ ರೂ. 1040–1900 ಪರಿಷ್ಕೃತ ಹಿರಿಯ ವೇತನ ಶ್ರೇಣಿಯಲ್ಲಿ ಕಾಲ್ಪನಿಕವಾಗಿ ನಿಗದಿಪಡಿಸಬೇಕಾದ ವೇತನ | ... | ರೂ. 1100 |
| 5. 1994ರ ಏಪ್ರಿಲ್ 1 ರಿಂದ ಜಾರಿಗೆ ಬರುವಂತೆ ರೂ. 1040–1900 ಪರಿಷ್ಕೃತ ಹಿರಿಯ ವೇತನ ಶ್ರೇಣಿಯಲ್ಲಿ ಪುನರ್ ನಿಗದಿ ಮಾಡಬೇಕಾದ ವೇತನ | ... | ರೂ. 1130 |
| 6. ಪರಿಷ್ಕೃತ ವೇತನ ಶ್ರೇಣಿಯಲ್ಲಿ ಮುಂದಿನ ವೇತನ ಬಡ್ತಿಯ ದಿನಾಂಕ | ... | 1995ರ ಏಪ್ರಿಲ್ 1. |

ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 12 ಎಸ್‌ಆರ್‌ಪಿ 94, ದಿನಾಂಕ 29 ಮಾರ್ಚ್ 1994

ಅನುಬಂಧ 11

ನಮೂನೆ

| ಸರ್ಕಾರಿ ನೌಕರನ ಹೆಸರು | 1993 ಜುಲೈ 1 ರಂದು ಧಾರಣ ಮಾಡಿದ್ದ ಹುದ್ದೆ | ಧಾರಣ ಮಾಡಿರುವ ಹುದ್ದೆಯ ಈಗಿನ ವೇತನ ಶ್ರೇಣಿ | 1993 ಜುಲೈ 1 ರಂದು ಇದ್ದಂತೆ ಈಗಿನ ವೇತನ ಶ್ರೇಣಿಯಲ್ಲಿ ಪಡೆಯುತ್ತಿದ್ದ ವೇತನ | ಈಗಿನ ವೇತನ ಶ್ರೇಣಿಯಲ್ಲಿ ಮುಂದಿನ ವೇತನ ಬಡ್ತಿಯ ದಿನಾಂಕ | ಹುದ್ದೆಗೆ ಅನ್ವಯವಾಗುವ ಪರಿಷ್ಕೃತ ವೇತನ ಶ್ರೇಣಿ | ಈಗಿನ ವೇತನ ಶ್ರೇಣಿಯಲ್ಲಿ ಪಡೆಯುತ್ತಿರುವ ಮೂಲ ವೇತನಕ್ಕೆ ಸಂವಾದಿಯಾಗಿ ಪರಿಷ್ಕೃತ ವೇತನ ಶ್ರೇಣಿಯಲ್ಲಿ ನಿಗದಿಪಡಿಸಿದ ವೇತನ | 8(1)ನೇ ನಿಯಮದ ಪರಂತುಕದ ಮೇರೆಗೆ ಮಾಡಿದ ಪುನರ್ ನಿಗದಿಯು ಪ್ರಯೋಜನಕಾರಿ ಯಾಗಿದೆಯೋ ಮತ್ತು ಹಾಗಿದ್ದರೆ ಅಂಥ ಪುನರ್ ನಿಗದಿಯ ಮುಂದಿನ ದಿನಾಂಕ | ಪರಿಷ್ಕೃತ ವೇತನ ಶ್ರೇಣಿಯಲ್ಲಿ ಮುಂದಿನ ವೇತನ ಬಡ್ತಿ ದಿನಾಂಕ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| | | | | | | | | |

ಟಿಪ್ಪಣಿ :– ಸರ್ಕಾರಿ ನೌಕರನ ಪ್ರಾರಂಭಿಕ ವೇತನವನ್ನು –

(ಎ) ಅವನು 1–7–1993 ರಂದು ಧಾರಣ ಮಾಡಿದ್ದ ಹುದ್ದೆಯ ಸಂಬಂಧದಲ್ಲಿ ಮತ್ತು

(ಬಿ) ಅವನು ಮೇಲಿನ ಹುದ್ದೆಯನ್ನು ಧಾರಣ ಮಾಡದಿದ್ದ ಪಕ್ಷದಲ್ಲಿ ಅವನು ಹೊಂದಿರಬಹುದಾಗಿದ್ದ ಹುದ್ದೆ ಯಾವುದಾದರೂ ಇದ್ದರೆ, ಆ ಹುದ್ದೆಯ ಸಂಬಂಧದಲ್ಲಿ ಪ್ರತ್ಯೇಕವಾಗಿ ನಿಗದಿಪಡಿಸತಕ್ಕುದು.

ಸಹಿ

ಸರ್ಕಾರಿ ಆದೇಶದ 5ನೇ ಪ್ಯಾರಾದಲ್ಲಿ ನಮೂದಿಸಿದ ಪ್ರಾಧಿಕಾರ

ಪದನಾಮ

ದಿನಾಂಕ

## ಕರ್ನಾಟಕ ಸರ್ಕಾರ

### ಅಧಿಸೂಚನೆ ಸಂಖ್ಯೆ: ಎಫ್‌ಡಿ 11 ಎಸ್‌ಆರ್‌ಪಿ 94 ದಿನಾಂಕ 28–03–1994

ಕರ್ನಾಟಕ ರಾಜ್ಯ ಸರ್ಕಾರಿ ಸೇವಾ ಅಧಿನಿಯಮ, 1978ರ ಪ್ರಕರಣ 3 ರ ಉಪ ಪ್ರಕರಣ (2)ರ ಪರಂತುಕದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ರಾಜ್ಯ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸಿದೆ ; ಎಂದರೆ :–

1. ಚಿಕ್ಕ ಹೆಸರು ಮತ್ತು ಪ್ರಾರಂಭ :– (1) ಈ ನಿಯಮಗಳನ್ನು ಕರ್ನಾಟಕ ಸರ್ಕಾರಿ ಸೇವಾ (ಪರಿಷ್ಕೃತ ವೇತನ) ನಿಯಮಗಳು, 1994 ಎಂದು ಕರೆಯತಕ್ಕದ್ದು.

(2) ಒಂಭತ್ತನೇ ನಿಯಮಕ್ಕೊಳಪಟ್ಟು ಅವು 1993ರ ಜುಲೈ ಮೊದಲನೇ ದಿನಾಂಕದಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದು.

2. ಅನ್ವಯ :– (1) ಈ ನಿಯಮಗಳಿಂದ ಅಥವಾ ಇವುಗಳ ಮೇರೆಗೆ ಅನ್ಯಥಾ ಉಪಬಂಧಿಸದ ಹೊರತು ಈ ನಿಯಮಗಳು ಸರ್ಕಾರಿ ಸೇವೆಗಳಿಗೆ ಮತ್ತು ಕರ್ನಾಟಕ ರಾಜ್ಯದ ವ್ಯವಹಾರಗಳ ಸಂಬಂಧದಲ್ಲಿನ ಹುದ್ದೆಗಳಿಗೆ ನೇಮಕಗೊಂಡ ವ್ಯಕ್ತಿಗಳಿಗೆ ಅನ್ವಯಿಸತಕ್ಕದ್ದು.

(2) ಈ ನಿಯಮಗಳು ಈ ಕೆಳಗಿನವರಿಗೆ ಅನ್ವಯಿಸತಕ್ಕುದ್ದಲ್ಲ :–

(ಅ) ಸರ್ಕಾರವು ಹೊರಡಿಸಿದ ಆದೇಶದ ಮೂಲಕ ಅನ್ಯಥಾ ಉಪಬಂಧಿಸದ ಹೊರತು, ಸರ್ಕಾರಿ ಸೇವೆಗಳ ನಿಯತ ಸಿಬ್ಬಂದಿ ವರ್ಗದಲ್ಲಿನ ಯಾವುದೇ ಹುದ್ದೆಯ ಮೇಲೆ ಧಾರಣಾಧಿಕಾರ ಹೊಂದಿಲ್ಲದ ಕಾಮಗಾರಿ ಹಣದಿಂದ ಸಂಬಳ ಪಡೆಯುವ ಸಿಬ್ಬಂದಿ ವರ್ಗಕ್ಕೆ ಸೇರಿದ ವ್ಯಕ್ತಿಗಳಿಗೆ ;

(ಆ) ಸರ್ಕಾರವು ಹೊರಡಿಸಿದ ಆದೇಶದ ಮೂಲಕ ಅನ್ಯಥಾ ಉಪಬಂಧಿಸದ ಹೊರತು, ಸಾದಿಲ್ವಾರು ನಿಧಿಗಳಿಂದ ಸಂಬಳ ನೀಡಲಾಗುವ ವ್ಯಕ್ತಿಗಳಿಗೆ ;

(ಇ) ಗಂಟೆ, ದಿನ, ವಾರ ಅಥವಾ ಮಾಸಿಕ ದರಗಳ ಆಧಾರದ ಮೇಲೆ ಮಜೂರಿಗಳನ್ನು ನೀಡಲಾಗುವ ವ್ಯಕ್ತಿಗಳಿಗೆ ;

(ಈ) ಪೂರ್ಣಕಾಲಿಕ ಉದ್ಯೋಗದಲ್ಲಿರದ ವ್ಯಕ್ತಿಗಳಿಗೆ ;

(ಉ) ಚಿಲ್ಲರೆ ಕೆಲಸದ ದರದ ಆಧಾರದ ಮೇಲೆ ಮಜೂರಿ ನೀಡಲಾಗುವ ವ್ಯಕ್ತಿಗಳಿಗೆ ;

(ಊ) ಕರಾರಿನಲ್ಲಿ ಅನ್ಯಥಾ ಉಪಬಂಧಿಸಲಾಗಿದ್ದ ಹೊರತು, ಕರಾರು ಆಧಾರದ ಮೇಲೆ ನೇಮಕಗೊಂಡ ವ್ಯಕ್ತಿಗಳಿಗೆ ;

(ಋ) ಸಂಚಿತ ವೇತನ ಅಥವಾ ಸಂಬಳದ ಆಧಾರದ ಮೇಲೆ ನೇಮಕಗೊಂಡ ವ್ಯಕ್ತಿಗಳಿಗೆ ;

(ಋ) ನಿವೃತ್ತಿ ನಂತರ ಸರ್ಕಾರಿ ಸೇವೆಗಳಲ್ಲಿ ಮರುನೇಮಕಗೊಂಡ ವ್ಯಕ್ತಿಗಳಿಗೆ ;

(ಎ) ಭಾರತ ಸಂವಿಧಾನದ 187ನೇ ಅನುಚ್ಛೇದದ (3) ನೇ ಖಂಡ, 229 ನೇ ಅನುಚ್ಛೇದದ (2) ನೇ ಖಂಡದ ಅಥವಾ 318 ನೇ ಅನುಚ್ಛೇದದ (ಬಿ) ಉಪಖಂಡದ ಮೇರೆಗೆ ರಚಿಸಲಾದ ನಿಯಮಗಳ ಮೂಲಕ ಯಾವ ವ್ಯಕ್ತಿಗಳ ಸೇವಾ ಷರತ್ತುಗಳನ್ನು ಕ್ರಮ ಬದ್ಧಗೊಳಿಸಲಾಗಿದೆಯೋ ಆ ವ್ಯಕ್ತಿಗಳಿಗೆ;

(ಏ) ಯು.ಜಿ.ಸಿ./ಎ.ಐ.ಸಿ.ಟಿ.ಇ. ವೇತನ ಶ್ರೇಣಿಗಳಲ್ಲಿ ವೇತನ ಪಡೆಯುತ್ತಿರುವ ವ್ಯಕ್ತಿಗಳಿಗೆ ;

(ಐ) ಸರ್ಕಾರದ ಅಧೀನದಲ್ಲಿ ಕಾರ್ಯನಿರ್ವಹಿಸುವ ಅಖಿಲ ಭಾರತ ಸೇವೆಗಳಿಗೆ ಸೇರಿದ ವ್ಯಕ್ತಿಗಳಿಗೆ ; ಮತ್ತು

(ಒ) ಸರ್ಕಾರವು, ಆದೇಶದ ಮೂಲಕ, ಈ ನಿಯಮಗಳ ಎಲ್ಲ ಅಥವಾ ಯಾವುದೇ ಉಪಬಂಧಗಳ ಪ್ರವರ್ತನೆಯಿಂದ ನಿರ್ದಿಷ್ಟವಾಗಿ ಹೊರತುಪಡಿಸಬಹುದಾದ ಯಾವುದೇ ಇತರ ವರ್ಗ ಅಥವಾ ಪ್ರವರ್ಗದ ವ್ಯಕ್ತಿಗಳಿಗೆ.

(3) **ಪರಿಭಾಷೆಗಳು :** ಈ ನಿಯಮಗಳಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸದ ಹೊರತು ;–

(ಅ) 'ಮೂಲವೇತನ' ಎಂದರೆ ಸರ್ಕಾರಿ ನೌಕರನು "ಪ್ರಸಕ್ತ ಶ್ರೇಣಿಯಲ್ಲಿ 1993ರ ಜುಲೈ 1 ರಂದು ಅಥವಾ ಆ ತರುವಾಯ ಯಾವುದೇ ದಿನಾಂಕದಂದು 'ಪರಿಷ್ಕೃತ ಶ್ರೇಣಿ'ಯಲ್ಲಿ ಅವನ ವೇತನವನ್ನು ಪುನಃ ನಿಗದಿಪಡಿಸಲಾಗುವ ದಿನದಂದು ಅವನು ಪಡೆಯುತ್ತಿದ್ದ ಮೂಲವೇತನ ಮತ್ತು ಅದು ಈ ಮುಂದಿನವುಗಳನ್ನು ಒಳಗೊಳ್ಳುತ್ತದೆ, ಎಂದರೆ"–

(i) ವಾರ್ಷಿಕ ಅಥವಾ ದ್ವೈವಾರ್ಷಿಕ ವೇತನ ಬಡ್ತಿ ಅಥವಾ ವೈಯಕ್ತಿಕ ವೇತನ ರೂಪದಲ್ಲಿ ನೀಡಿಲ್ಲದ ಅಡಿಷನಲ್ ವೇತನ ಬಡ್ತಿ ;

(ii) 'ಪ್ರಸಕ್ತ ಶ್ರೇಣಿ'ಯ ಗರಿಷ್ಟ ವೇತನಕ್ಕಿಂತ ಹೆಚ್ಚಿಗೆಯಾಗಿ ನೀಡಲಾದ ಸ್ಥಗಿತ ವೇತನ ಬಡ್ತಿ ;

(iii) 1974 ರ ಕರ್ನಾಟಕ ಸರ್ಕಾರಿ ಸೇವಾ (ಸೇವೆ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳ 6 ನೇ ನಿಯಮದ ಉಪಬಂಧಗಳಿಗೆ ಅನುಸಾರವಾಗಿ 'ಪ್ರಸಕ್ತ' ಶ್ರೇಣಿಯ ಗರಿಷ್ಟ ವೇತನಕ್ಕಿಂತ ಹೆಚ್ಚಿಗೆ ನೀಡಲಾದ ಅಡಿಷನಲ್ ವೇತನ ಬಡ್ತಿ ; ಮತ್ತು

(iv) 1987 ರ ಕರ್ನಾಟಕ ಸರ್ಕಾರಿ ಸೇವಾ (ಪರಿಷ್ಕೃತ ವೇತನ) ನಿಯಮಗಳ 7 ನೇ ನಿಯಮದ (3) ನೇ ಉಪನಿಯಮದ ಮೇರೆಗೆ ನೀಡಲಾದ ವೈಯಕ್ತಿಕ ವೇತನ ;

ಪರಂತು, ಅದು ಈ ಮುಂದಿನವುಗಳನ್ನು ಒಳಗೊಳ್ಳತಕ್ಕುದಲ್ಲ ; ಎಂದರೆ –

(i) ವಿಶೇಷ ವೇತನ ;

(ii) ಮೇಲೆ (iv) ರಲ್ಲಿ ನಮೂದಿಸಲಾದುದನ್ನು ಹೊರತುಪಡಿಸಿ ವೈಯಕ್ತಿಕ ವೇತನ ;

(iii) ತಾಂತ್ರಿಕ ವೇತನ ; ಮತ್ತು

(iv) ಕರ್ನಾಟಕ ಸರ್ಕಾರಿ ಸೇವಾ ನಿಯಮಗಳ 8 ನೇ ನಿಯಮದ ಉಪನಿಯಮ (32) ರ ಮೇರೆಗೆ, ಸರ್ಕಾರವು ವೇತನವೆಂದು ವಿಶೇಷವಾಗಿ ವರ್ಗೀಕರಿಸಿದ ಯಾವುದೇ ಇತರ ಉಪಲಬ್ಧಗಳು.

(ಆ) ಸರ್ಕಾರಿ ನೌಕರನಿಗೆ ಸಂಬಂಧಿಸಿದಂತೆ 'ಪ್ರಸಕ್ತ ಶ್ರೇಣಿ' ಎಂದರೆ ಖಾಯಂ ಅಥವಾ ಸ್ಥಾನಾಪನ್ನ ಅಥವಾ ತಾತ್ಕಾಲಿಕ ಸಾಮರ್ಥ್ಯದಲ್ಲಿ 1993 ರ ಜುಲೈ 1 ನೇ ದಿನಾಂಕದಂದು ಅವನು ಹೊಂದಿದ್ದ ಹುದ್ದೆಗೆ ಅನ್ವಯವಾಗುವ 1987 ರ ಶ್ರೇಣಿ ಮತ್ತು ಸದರಿ ಹುದ್ದೆಗೆ ಸಂಬಂಧಿಸಿದಂತೆ ಅವನಿಗೆ ಅನ್ವಯವಾಗುವ ವೈಯಕ್ತಿಕ ಶ್ರೇಣಿ, ಯಾವುದಾದರೂ, ಇದ್ದಲ್ಲಿ, ಅದನ್ನು ಮತ್ತು ಸದರೀ ಹುದ್ದೆಗೆ ಸಂಬಂಧಿಸಿದಂತೆ ನೀಡಲಾದ 'ಪ್ರಸಕ್ತ ಆಯ್ಕೆ ಕಾಲಿಕ ಶ್ರೇಣಿ ಅಥವಾ ಪ್ರಸಕ್ತ ಹಿರಿಯ ವೇತನ ಶ್ರೇಣಿ ಇವುಗಳಲ್ಲಿ ಯಾವುದಾದರನ್ನು ಅವನಿಗೆ ನೀಡಿದ್ದಲ್ಲಿ ಅದೂ ಒಳಗೊಳ್ಳುತ್ತದೆ.

(ಇ) ಒಂದು ಹುದ್ದೆಯನ್ನು ಧಾರಣ ಮಾಡಿರುವ ಸರ್ಕಾರಿ ನೌಕರನಿಗೆ ಸಂಬಂಧಿಸಿದಂತೆ 'ಪ್ರಸಕ್ತ ಆಯ್ಕೆ ಕಾಲಿಕ ವೇತನ ಶ್ರೇಣಿ' ಎಂದರೆ ಕಾಲಕಾಲಕ್ಕೆ ತಿದ್ದುಪಡಿಗೊಂಡ 1983 ರ ಕರ್ನಾಟಕ ಸರ್ಕಾರಿ ಸೇವಾ (ಕಾಲಬದ್ಧ ಬಡ್ತಿ) ನಿಯಮಗಳ ಉಪಬಂಧಗಳಿಗೆ ಅನುಸಾರವಾಗಿ ಸದರಿ ಹುದ್ದೆಯ ಸಂಬಂಧದಲ್ಲಿ 1993 ರ ಜುಲೈ 1 ಕ್ಕೆ ಪೂರ್ವದಲ್ಲಿ ಅವನಿಗೆ ನೀಡಲಾದ ಆಯ್ಕೆ ಕಾಲಿಕ ವೇತನ ಶ್ರೇಣಿ ;

(ಈ) ಒಂದು ಹುದ್ದೆಯನ್ನು ಧಾರಣ ಮಾಡಿರುವ ಸರ್ಕಾರಿ ನೌಕರನಿಗೆ ಸಂಬಂಧಿಸಿದಂತೆ 'ಪ್ರಸಕ್ತ ಹಿರಿಯ ವೇತನ ಶ್ರೇಣಿ' ಎಂದರೆ ಕಾಲ ಕಾಲಕ್ಕೆ ತಿದ್ದುಪಡಿಗೊಂಡ 1991ರ ಕರ್ನಾಟಕ ಸರ್ಕಾರಿ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ಮುಂಬಡ್ತಿ ನೀಡುವಿಕೆ) ನಿಯಮಗಳ ಉಪಬಂಧಗಳಿಗೆ ಅನುಸಾರವಾಗಿ ಸದರಿ ಹುದ್ದೆಯ ಸಂಬಂಧದಲ್ಲಿ 1993ರ ಜುಲೈ 1 ಕ್ಕೆ ಪೂರ್ವದಲ್ಲಿ ಅವನಿಗೆ ನೀಡಲಾದ ಹಿರಿಯ ವೇತನ ಶ್ರೇಣಿ ;

(ಉ) 'ಸರ್ಕಾರ' ಎಂದರೆ ಕರ್ನಾಟಕ ಸರ್ಕಾರ ;

(ಊ) ಒಂದು ಹುದ್ದೆಗೆ ಸಂಬಂಧಿಸಿದಂತೆ '1987 ರ ಶ್ರೇಣಿ' ಎಂದರೆ 1987 ರ ಕರ್ನಾಟಕ ಸರ್ಕಾರಿ ಸೇವಾ (ಪರಿಷ್ಕೃತ ವೇತನ) ನಿಯಮಗಳ ಮೂಲಕ ಅಥವಾ ನಿಯಮಗಳ ಮೇರೆಗೆ ಆ ಹುದ್ದೆಗೆ ಗೊತ್ತುಪಡಿಸಲಾದ ವೇತನ ಶ್ರೇಣಿ ;

(ಋ) ಒಂದು ಹುದ್ದೆಗೆ ಸಂಬಂಧಿಸಿದಂತೆ 'ಪರಿಷ್ಕೃತ ಶ್ರೇಣಿ' ಎಂದರೆ 4 ನೇ ನಿಯಮದ (2) ನೇ ಉಪನಿಯಮದ ಮೇರೆಗೆ ಆ ಹುದ್ದೆಗೆ ಪ್ರತ್ಯೇಕವಾಗಿ 'ಪರಿಷ್ಕೃತ ಶ್ರೇಣಿ' ಯನ್ನು ಅಧಿಸೂಚಿಸಿದ್ದ ಹೊರತು, ಮೊದಲನೇ ಅನುಸೂಚಿಯಲ್ಲಿ, 2 ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾದಂತೆ ಅದಕ್ಕೆ ಅನ್ವಯವಾಗುವ 'ಪ್ರಸಕ್ತ ಶ್ರೇಣಿ'ಯ ಎದುರಿಗೆ ಅದರ 3 ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾದ ವೇತನ ಶ್ರೇಣಿ ಮತ್ತು ಅದರಲ್ಲಿ ಆ ಹುದ್ದೆಗೆ ಗೊತ್ತುಪಡಿಸಲಾದ ಪರಿಷ್ಕೃತ ಆಯ್ಕೆ ಕಾಲಿಕ ವೇತನ ಶ್ರೇಣಿ ಮತ್ತು 'ಪರಿಷ್ಕೃತ ಹಿರಿಯ ವೇತನ ಶ್ರೇಣಿ' ಯಾವುದಾದರೂ ಇದ್ದರೆ ಅದೂ ಸಹ ಸೇರುತ್ತದೆ ;

(ೠ) ಹುದ್ದೆಯನ್ನು ಹೊಂದಿರುವ ಒಬ್ಬ ಸರ್ಕಾರಿ ನೌಕರನ ಸಂಬಂಧದಲ್ಲಿ 'ಪರಿಷ್ಕೃತ ಆಯ್ಕೆ ಕಾಲಿಕ ವೇತನ ಶ್ರೇಣಿ' ಎಂದರೆ 4 ನೇ ನಿಯಮದ (3)ನೇ ಉಪನಿಯಮದ ಮೂಲಕ ಗೊತ್ತುಪಡಿಸಲಾದ ಮತ್ತು ಕಾಲಕಾಲಕ್ಕೆ ತಿದ್ದುಪಡಿಗೊಂಡಂತೆ 1983ರ ಕರ್ನಾಟಕ ಸರ್ಕಾರಿ ಸೇವಾ (ಕಾಲಬದ್ಧ ಬಡ್ತಿ) ನಿಯಮಗಳ ಉಪಬಂಧಗಳಿಗೆ ಅನುಸಾರವಾಗಿ ಅವನಿಗೆ ಅನುಮತೀಯವಾದ ಆಯ್ಕೆ ಕಾಲಿಕ ವೇತನ ಶ್ರೇಣಿ ;

(ಎ) ಹುದ್ದೆಯನ್ನು ಹೊಂದಿರುವ ಒಬ್ಬ ಸರ್ಕಾರಿ ನೌಕರನ ಸಂಬಂಧದಲ್ಲಿ ಪರಿಷ್ಕೃತ ಹಿರಿಯ ವೇತನ ಶ್ರೇಣಿ ಎಂದರೆ 4 ನೇ ನಿಯಮದ (4) ನೇ ಉಪನಿಯಮದ ಮೂಲಕ ಗೊತ್ತುಪಡಿಸಲಾದ ಮತ್ತು ಕಾಲಕಾಲಕ್ಕೆ ತಿದ್ದುಪಡಿಗೊಂಡಂತೆ 1991 ರ ಕರ್ನಾಟಕ ಸರ್ಕಾರಿ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ಮುಂಬಡ್ತಿ ನೀಡುವಿಕೆ) ನಿಯಮಗಳ ಉಪಬಂಧಗಳಿಗೆ ಅನುಸಾರವಾಗಿ ಅವನಿಗೆ ಅನುಮತೀಯವಾದ ಹಿರಿಯ ವೇತನ ಶ್ರೇಣಿ ;

(ಏ) 'ಅನುಸೂಚಿ' ಎಂದರೆ ಈ ನಿಯಮಗಳಿಗೆ ಲಗತ್ತಿಸಲಾದ ಅನುಸೂಚಿ ;

(ಐ) ''ಕೋಷ್ಟಕ'' ಎಂದರೆ ಈ ನಿಯಮಗಳಿಗೆ ಲಗತ್ತಿಸಲಾದ ಕೋಷ್ಟಕ.

4. ಹುದ್ದೆಗಳ ವೇತನ ಶ್ರೇಣಿ :- (1) ಈ ನಿಯಮದ (2), (3) ಮತ್ತು (4) ನೇ ಉಪನಿಯಮಗಳಲ್ಲಿ ಅನ್ಯಥಾ ಉಪಬಂಧಿಸದ ಹೊರತು, ಈ ನಿಯಮಗಳ ಪ್ರಾರಂಭದ

ದಿನಾಂಕದಿಂದ ಯಾವುದೇ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯು, ಮೊದಲನೇ ಅನುಸೂಚಿಯಲ್ಲಿ 2ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾದಂತೆ ಅದಕ್ಕೆ ಅನ್ವಯವಾಗುವ 'ಪ್ರಸಕ್ತ ಶ್ರೇಣಿ' ಯ ಎದುರಿಗೆ ಅದರ 3ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾದ 'ಪರಿಷ್ಕೃತ ಶ್ರೇಣಿ' ಯಾಗಿರತಕ್ಕದ್ದು.

(2) ಸರ್ಕಾರವು ಯಾವುದೇ ಹುದ್ದೆಗೆ ಮೊದಲನೇ ಅನುಸೂಚಿಯ 3ನೇ ಅಂಕಣದಲ್ಲಿನ ಸಂವಾದಿ ನಮೂದಿನಲ್ಲಿ ನಿರ್ದಿಷ್ಟಪಡಿಸಿರುವಂಥ ಶ್ರೇಣಿಯಲ್ಲದ ಬೇರೊಂದು 'ಪರಿಷ್ಕೃತ ಶ್ರೇಣಿ' ಯನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚಿಸಲಾಗುವ ಆದೇಶದ ಮೂಲಕ 1993ರ ಜುಲೈ 1 ರಿಂದ ಅಥವಾ ಸೂಕ್ತವೆಂದು ಭಾವಿಸಬಹುದಾದಂತಹ ಅನಂತರದ ದಿನಾಂಕದಿಂದ ಜಾರಿಗೆ ಬರುವಂತೆ ಮಂಜೂರು ಮಾಡಬಹುದು.

(3) ಈ ನಿಯಮಗಳು ಪ್ರಾರಂಭವಾದ ದಿನಾಂಕದಿಂದ, ಕಾಲಕಾಲಕ್ಕೆ ಪರಿಷ್ಕೃತಗೊಂಡ 1983 ರ ಕರ್ನಾಟಕ ಸರ್ಕಾರಿ ಸೇವಾ (ಕಾಲಬದ್ಧ ಬಡ್ತಿ) ನಿಯಮಗಳ ಉಪಬಂಧಗಳಿಗನುಗುಣವಾಗಿ, ಹುದ್ದೆಯನ್ನು ಧಾರಣ ಮಾಡಿರುವ ಸರ್ಕಾರಿ ನೌಕರನಿಗೆ ಸಂಬಂಧಿಸಿದಂತೆ ದೊರೆಯುವ ಆಯ್ಕೆ ಕಾಲಿಕ ವೇತನ ಶ್ರೇಣಿಯು ಎರಡನೇ ಅನುಸೂಚಿಯ 2ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿರುವಂಥ ಹುದ್ದೆಗೆ ಅನ್ವಯವಾಗುವ ಪರಿಷ್ಕೃತ ವೇತನ ಶ್ರೇಣಿಯ 3ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದ 'ಪರಿಷ್ಕೃತ ಆಯ್ಕೆ ಕಾಲಿಕ ವೇತನ ಶ್ರೇಣಿ' ಯಾಗಿರತಕ್ಕದ್ದು.

ಪರಂತು, ಕರ್ನಾಟಕ ಸರ್ಕಾರಿ ಸೇವಾ (ಪರಿಷ್ಕೃತ ವೇತನ) ನಿಯಮಗಳು, 1982 ರಡಿಯಲ್ಲಿ ರೂ.410–700 'ವೇತನ ಶ್ರೇಣಿ' ಯಲ್ಲಿ ಹುದ್ದೆಯನ್ನು ಧಾರಣ ಮಾಡಿರುವ ಸರ್ಕಾರಿ ನೌಕರನಿಗೆ 1986ರ ಜುಲೈ 1ಕ್ಕೆ ಮುನ್ನ ರೂ. 490–950, ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಕರ್ನಾಟಕ ಸರ್ಕಾರಿ ಸೇವಾ (ಕಾಲಬದ್ಧ ಬಡ್ತಿ) ನಿಯಮಗಳಡಿಯಲ್ಲಿ ಮಂಜೂರು ಆಗಿದ್ದರೆ ಅವನಿಗೆ ಅನ್ವಯವಾಗತಕ್ಕ ಪರಿಷ್ಕೃತ ಆಯ್ಕೆ ಕಾಲಿಕ, ವೇತನ ಶ್ರೇಣಿಯು ರೂ. 1040–1900.

(4) ಈ ನಿಯಮಗಳು ಪ್ರಾರಂಭವಾದ ದಿನಾಂಕದಿಂದ ಕಾಲಕಾಲಕ್ಕೆ ಪರಿಷ್ಕೃತಗೊಂಡ 1991 ರ ಕರ್ನಾಟಕ ಸರ್ಕಾರಿ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ಮುಂಬಡ್ತಿ ನೀಡುವಿಕೆ) ನಿಯಮಗಳ ಉಪಬಂಧಗಳಿಗನುಗುಣವಾಗಿ ಹುದ್ದೆಯನ್ನು ಧಾರಣ ಮಾಡಿರುವ ಸರ್ಕಾರಿ ನೌಕರನಿಗೆ ಸಂಬಂಧಿಸಿದಂತೆ ದೊರೆಯುವ ಹಿರಿಯ ವೇತನ ಶ್ರೇಣಿಯು, 1983 ರ ಕರ್ನಾಟಕ ಸರ್ಕಾರಿ ಸೇವಾ (ಕಾಲಬದ್ಧ ಬಡ್ತಿ) ನಿಯಮಗಳ ಮೇರೆಗೆ ಮಂಜೂರು ಮಾಡಿದ 'ಪರಿಷ್ಕೃತ ಆಯ್ಕೆ ಕಾಲಿಕ ವೇತನ ಶ್ರೇಣಿ' ಯ ನಂತರದ ಪರಿಷ್ಕೃತ ವೇತನ ಶ್ರೇಣಿ ಆಗಿರುತ್ತದೆ ಅಥವಾ ಸರ್ಕಾರಿ ನೌಕರನು ಧಾರಣಮಾಡಿರುವ ಹುದ್ದೆಗೆ ಅನ್ವಯವಾಗುವಂತೆ

1983 ರ ಕರ್ನಾಟಕ ಸರ್ಕಾರಿ ಸೇವಾ (ಕಾಲಬದ್ಧ ಬಡ್ತಿ) ನಿಯಮಗಳಿಗನುಗುಣವಾಗಿ ಮಂಜೂರಾದ ಪರಿಷ್ಕೃತ ಆಯ್ಕೆ ಕಾಲಿಕ ವೇತನ ಶ್ರೇಣಿ ಹಾಗೂ ಮುಂಬಡ್ತಿ ಹುದ್ದೆಯ ಪರಿಷ್ಕೃತ ವೇತನ ಶ್ರೇಣಿಯೂ ಒಂದೇ ಆಗಿದ್ದಲ್ಲಿ ಅಥವಾ ಸರಿಸಮಾನವಾಗಿದ್ದಲ್ಲಿ ಮುಂಬಡ್ತಿಯ ಪರಿಷ್ಕೃತ ವೇತನ ಶ್ರೇಣಿಯಾಗಿರುತ್ತದೆ.

(5) **ಪರಿಷ್ಕೃತ ಶ್ರೇಣಿಯಲ್ಲಿ ವೇತನ ಪಡೆಯುವುದು:–** ಈ ನಿಯಮಗಳಲ್ಲಿ ಅನ್ಯಥಾ ಉಪಬಂಧಿಸಿದ ಹೊರತು, ಸರ್ಕಾರಿ ನೌಕರನು ತಾನು ಯಾವ ಹುದ್ದೆಗೆ ನಿಯೋಜಿತನಾಗಿರುವನೋ ಆ ಹುದ್ದೆಗೆ ಅನ್ವಯವಾಗುವ 'ಪರಿಷ್ಕೃತ ಶ್ರೇಣಿ' ಯಲ್ಲಿ ವೇತನವನ್ನು ಪಡೆಯತಕ್ಕದ್ದು.

(6) **ಪರಿಷ್ಕೃತ ವೇತನ ಶ್ರೇಣಿಯ ಅನ್ವಯ:–** ಈ ನಿಯಮಗಳ ಇತರ ಉಪಬಂಧಗಳಿಗೊಳಪಟ್ಟು "ಪರಿಷ್ಕೃತ ವೇತನ ಶ್ರೇಣಿ" ಯು;–

(ಅ) 1993 ರ ಜುಲೈ 1 ಕ್ಕೆ ಮುಂಚಿತವಾಗಿ ಸೇವೆಗೆ ಸೇರಿದ ಮತ್ತು ಆ ದಿನಾಂಕದಲ್ಲಿ ಸೇವೆಯಲ್ಲಿದ್ದ ಸರ್ಕಾರಿ ನೌಕರ ;

(ಆ) 1993 ರ ಜುಲೈ 1ಕ್ಕೆ ಮುಂಚಿತವಾಗಿ 'ಪ್ರಸಕ್ತ ಆಯ್ಕೆ ಕಾಲಿಕ ವೇತನ ಶ್ರೇಣಿ' ಮಂಜೂರಾದಂಥ ಸರ್ಕಾರಿ ನೌಕರ ;

(ಇ) 1993 ರ ಜುಲೈ 1 ಕ್ಕೆ ಮುಂಚಿತವಾಗಿ 'ಪ್ರಸಕ್ತ ಹಿರಿಯ ವೇತನ ಶ್ರೇಣಿ' ಮಂಜೂರಾದಂತಹ ಸರ್ಕಾರಿ ನೌಕರ ;

(ಈ) 1993 ರ ಜುಲೈ 1ಕ್ಕೆ ಮುಂಚಿತವಾಗಿ ಅಥವಾ 1993 ರ ಜುಲೈ 1 ರಂದು ಅಥವಾ ನಂತರ ತಾನು ಧಾರಣ ಮಾಡಿದ್ದ ಹುದ್ದೆಯಲ್ಲದೆ ಬೇರೊಂದು ಹುದ್ದೆಯ ಸೇವೆಗೆ ಸೇರಿದ ಅಥವಾ ಬಡ್ತಿ ಹೊಂದಿದ ಅಥವಾ ನೇಮಕಗೊಂಡ ಸರ್ಕಾರಿ ನೌಕರ ;

(ಉ) 1993 ರ ಜುಲೈ 1 ರಂದು ಅಥವಾ ನಂತರ 'ಪರಿಷ್ಕೃತ ಆಯ್ಕೆ ಕಾಲಿಕ ವೇತನ ಶ್ರೇಣಿ' ಯನ್ನು ಮಂಜೂರು ಮಾಡಬಹುದಾದಂತಹ ಸರ್ಕಾರಿ ನೌಕರನಿಗೆ ; ಮತ್ತು

(ಊ) 1993 ರ ಜುಲೈ 1 ರಂದು ಅಥವಾ ನಂತರ 'ಪರಿಷ್ಕೃತ ಹಿರಿಯ ವೇತನ ಶ್ರೇಣಿ' ಯನ್ನು ಮಂಜೂರು ಮಾಡಬಹುದಾಂದತಹ ಸರ್ಕಾರಿ ನೌಕರನಿಗ ಅನ್ವಯವಾಗತಕ್ಕದ್ದು.

7. "ಪರಿಷ್ಕೃತ ವೇತನ ಶ್ರೇಣಿ"ಯಲ್ಲಿ ಪ್ರಾರಂಭಿಕ ವೇತನವನ್ನು ನಿಗದಿಪಡಿಸುವುದು :–

(1) 6ನೇ ನಿಯಮದ (ಅ), (ಆ) ಮತ್ತು (ಇ) ಖಂಡಗಳಲ್ಲಿ ಉಲ್ಲೇಖಿಸಿದಂಥ ಸರ್ಕಾರಿ ನೌಕರನ ಪ್ರಾರಂಭಿಕ ವೇತನವನ್ನು ಸರ್ಕಾರವು ವಿಶೇಷ ಆದೇಶಗಳ ಮೂಲಕ ಅನ್ಯಥಾ ಆದೇಶಿಸಿದ ಹೊರತು ಅವನಿಗೆ ಅನ್ವಯವಾಗುವ 'ಪರಿಷ್ಕೃತ ವೇತನ ಶ್ರೇಣಿಯಲ್ಲಿ':–

(ಅ) 1993ರ ಜುಲೈ 1ರಂದು ಅವನು ಧಾರಣ ಮಾಡಿದ್ದ ಹುದ್ದೆಗೆ ಸಂಬಂಧಿಸಿದಂತೆ ಮತ್ತು

(ಆ) ಅವನು ಮೇಲಿನ ಹುದ್ದೆಯನ್ನು ಧಾರಣ ಮಾಡಿರದ ಪಕ್ಷದಲ್ಲಿ ಆ ದಿನಾಂಕದಂದು ಅವನು ಧಾರಣ ಮಾಡಿರಬಹುದಾಂಥ ಕೆಳಗಿನ ಹುದ್ದೆ ಯಾವುದಾದರೂ ಇದ್ದರೆ ಅದಕ್ಕೆ ಸಂಬಂಧಿಸಿದಂತೆ

ಪ್ರತ್ಯೇಕವಾಗಿ ನಿಗದಿಗೊಳಿಸತಕ್ಕುದು.

(2) ಪ್ರಾರಂಭಿಕ ವೇತನವನ್ನು, ನಾಲ್ಕನೇ ಅನುಸೂಚಿಯ 1ನೇ ಅಂಕಣದಲ್ಲಿ ಕಂಡು ಬರುವ 'ಪ್ರಸಕ್ತ ಶ್ರೇಣಿ'ಯಲ್ಲಿನ ಅವನ 'ಮೂಲ ವೇತನ' ಕ್ಕೆ ಸಂವಾದಿಯಾಗಿ, ಆ ಅನುಸೂಚಿಯ 2ನೇ ಅಂಕಣದಲ್ಲಿ , ನಿರ್ದಿಷ್ಟಪಡಿಸಿರುವ ಹಂತದಲ್ಲಿ ನಿಗದಿಗೊಳಿಸತಕ್ಕದ್ದು.

(3) ನಾಲ್ಕನೇ ಅನುಸೂಚಿಯ 2ನೇ ಅಂಕಣದಲ್ಲಿನಿದಿಷ್ಟಪಡಿಸಲಾದ "ವೈಯಕ್ತಿಕ ವೇತನ"ವನ್ನು, ಬಡ್ತಿಯ ಮೇಲೆ ವೇತನವನ್ನು ನಿಗದಿಗೊಳಿಸುವುದು ಸೇರಿದಂತೆ ಎಲ್ಲಾ ಉದ್ದೇಶಗಳಿಗಾಗಿ ವೇತನ ಎಂದು ಪರಿಗಣಿಸತಕ್ಕುದು.

(4) ಸರ್ಕಾರಿ ನೌಕರನೊಬ್ಬನ ಮೂಲವೇತನವು ನಾಲ್ಕನೇ ಅನುಸೂಚಿಯ 1ನೇ ಅಂಕಣದಲ್ಲಿ ಕಾಣಬರದಿದ್ದರೆ ಅಂಥ ಪ್ರಕರಣವನ್ನು ಆದೇಶಗಳಿಗಾಗಿ ಸರ್ಕಾರಕ್ಕೆ ಕಳುಹಿಸತಕ್ಕುದು.

(5) (ಅ) ಸರ್ಕಾರಿ ನೌಕರನು 1993ರ ಜುಲೈ 1 ರಂದು ಅಥವಾ ಅನಂತರ ಸೇವೆಗೆ ಸೇರಿದರೆ ಅವನ ವೇತನವನ್ನು, ಕರ್ನಾಟಕ ಸರ್ಕಾರಿ ಸೇವಾ ನಿಯಮಗಳ ಉಪಬಂಧಗಳಿಗನುಗುಣವಾಗಿ ಅವನು ನೇಮಕವಾಗಿರುವಂಥ ಹುದ್ದೆಗೆ ಅನ್ವಯವಾಗುವ ಪರಿಷ್ಕೃತ ವೇತನ ಶ್ರೇಣಿಯಲ್ಲಿ ನಿಗದಿಗೊಳಿಸತಕ್ಕುದು.

(ಆ) ಸರ್ಕಾರಿ ನೌಕರನು 1993ರ ಜುಲೈ 1 ರಂದು ಅಥವಾ ಅನಂತರ, ಆ ದಿನಾಂಕಕ್ಕೆ ಮುಂಚಿತವಾಗಿ ಅವನು ಧಾರಣ ಮಾಡಿರದ ಯಾವುದೇ ಹುದ್ದೆಗೆ ಬಡ್ತಿ ಹೊಂದಿದ್ದರೆ ಅಥವಾ ನೇಮಕವಾಗಿದ್ದರೆ ಅವನ ವೇತನವನ್ನು, ಈ ನಿಯಮದ (1) ರಿಂದ (4) ರ ವರೆಗಿನ ಉಪ ನಿಯಮಗಳ ಉಪಬಂಧಗಳಿಗನುಗುಣವಾಗಿ 1993 ರ ಜುಲೈ 1ಕ್ಕೆ

ಮುಂಚಿತವಾಗಿ ಅವನು ಧಾರಣ ಮಾಡಿದ್ದ ಹುದ್ದೆಗೆ ಅನ್ವಯವಾಗುವ 'ಪರಿಷ್ಕೃತ ಶ್ರೇಣಿ'ಯಲ್ಲಿ ನಿಗದಿಗೊಳಿಸತಕ್ಕದು ಮತ್ತು ಅನಂತರ ಹಾಗೆ ನಿಗದಿಗೊಳಿಸಲಾದ ವೇತನದ ಆಧಾರದ ಮೇಲೆ ಅವನ ವೇತನವನ್ನು ಕರ್ನಾಟಕ ಸರ್ಕಾರಿ ಸೇವಾ ನಿಯಮಗಳ ಉಪಬಂಧಗಳಿಗನುಗುಣವಾಗಿ ಅವನು ಬಡ್ತಿ ಹೊಂದಿದ ಅಥವಾ ನೇಮಕಗೊಂಡ ಹುದ್ದೆಗೆ ಅನ್ವಯವಾಗುವಂಥ ವೇತನ ಶ್ರೇಣಿಯಲ್ಲಿ ನಿಗದಿಗೊಳಿಸತಕ್ಕದ್ದು.

(6) ಸರ್ಕಾರಿ ನೌಕರನು 1993 ರ ಜುಲೈ 1 ರಂದು ಅಥವಾ ಅನಂತರ 'ಆಯ್ಕೆ ಕಾಲಿಕ ಶ್ರೇಣಿ' ಅಥವಾ 'ಹಿರಿಯ ವೇತನ ಶ್ರೇಣಿ' ಮಂಜೂರಾಗಿದ್ದರೆ ಅವನು ಧಾರಣ ಮಾಡಿದ ಹುದ್ದೆಗೆ ಅನ್ವಯವಾಗುವ 'ಪರಿಷ್ಕೃತ ವೇತನ ಶ್ರೇಣಿ'ಯಲ್ಲಿನ ಅವನ ವೇತನವನ್ನು ಈ ನಿಯಮದ (1) ರಿಂದ (4) ರ ವರೆಗಿನ ಉಪನಿಯಮಗಳ ಉಪಬಂಧಗಳಿಗನುಗುಣವಾಗಿ ನಿಗದಿಗೊಳಿಸತಕ್ಕುದು ಮತ್ತು ಅನಂತರ ಹಾಗೆ ನಿಗದಿಗೊಳಿಸಲಾದ ವೇತನದ ಆಧಾರದ ಮೇಲೆ ಅವನ ವೇತನವನ್ನು ಆಯ್ಕೆ ಕಾಲಿಕ ವೇತನ ಶ್ರೇಣಿಯಲ್ಲಿ ಅಥವಾ ಹಿರಿಯ ವೇತನ ಶ್ರೇಣಿಯಲ್ಲಿ ಸಂಧರ್ಭಾನುಸಾರ ಕರ್ನಾಟಕ ಸರ್ಕಾರಿ ಸೇವಾ (ಕಾಲಬದ್ಧ ಬಡ್ತಿ) ನಿಯಮಗಳು, 1983 ರ 4ನೇ ನಿಯಮಕ್ಕನುಗುಣವಾಗಿ ಆಯ್ಕೆ ಕಾಲಿಕ ವೇತನ ಶ್ರೇಣಿಯಲ್ಲಿ ಅಥವಾ ಕರ್ನಾಟಕ ಸರ್ಕಾರಿ ಸೇವೆಗಳ (ಹಿರಿಯ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ಮುಂಬಡ್ತಿ ನೀಡುವಿಕೆ) ನಿಯಮಗಳು, 1991ರ ನಿಯಮ 7ಕ್ಕೆ ಅನುಗುಣವಾಗಿ ಹಿರಿಯ ವೇತನಶ್ರೇಣಿಯಲ್ಲಿ ನಿಗದಿಗೊಳಿಸತಕ್ಕದು.

(7) ಈ ನಿಯಮದ (2)ನೇ ಉಪ ನಿಯಮದ ಮೇರೆಗಿನ ವೇತನ ನಿಗದಿಯಲ್ಲಿ 1993 ರ ಜುಲೈ 1ರ ನಿಕಟಪೂರ್ವದಲ್ಲಿ ಅದೇ ಉದ್ಯೋಗಿ ವೃಂದದಲ್ಲಿ ತನಗಿಂತ ಕಿರಿಯನಾಗಿರುವ ಸರ್ಕಾರಿ ನೌಕರನ ವೇತನಕ್ಕಿಂತ ಹೆಚ್ಚು ವೇತನವನ್ನು ಪ್ರಸಕ್ತ ವೇತನ ಶ್ರೇಣಿಯಲ್ಲಿ ಪಡೆಯುವ ಸರ್ಕಾರಿ ನೌಕರನ ವೇತನವು 'ಪರಿಷ್ಕೃತ ವೇತನ ಶ್ರೇಣಿ'ಯಲ್ಲಿ ಅಂಥ ಕಿರಿಯ ನೌಕರನಿಗಿಂತ ಕಡಿಮೆ ಹಂತದಲ್ಲಿ ನಿಗದಿಯಾಗಿದ್ದರೆ, ಅವನ ವೇತನವನ್ನು ಆ ಕಿರಿಯ ನೌಕರನು 'ಪರಿಷ್ಕೃತ ವೇತನ ಶ್ರೇಣಿ'ಯಲ್ಲಿ ಪಡೆಯುತ್ತಿರುವ ಹಂತಕ್ಕೆ ಏರಿಸತಕ್ಕದ್ದು.

(8) 1993 ರ ಜುಲೈ 1ಕ್ಕೆ ಮುಂಚಿತವಾಗಿ ಹುದ್ದೆಗೆ ಬಡ್ತಿ ಹೊಂದಿದ ಹಿರಿಯ ಸರ್ಕಾರಿ ನೌಕರನು 1993 ರ ಜುಲೈ 1 ರಂದು ಅಥವಾ ಅನಂತರ ಮೇಲಿನ ಹುದ್ದೆಗೆ ಬಡ್ತಿ ಹೊಂದಿದ ತನ್ನ ಕಿರಿಯ ನೌಕರನ 'ಪರಿಷ್ಕೃತ ವೇತನ ಶ್ರೇಣಿ'ಯ ವೇತನಕ್ಕಿಂತ ಕಡಿಮೆ ವೇತನ ಪಡೆಯುತ್ತಿದ್ದರೆ, ಹಿರಿಯ ಸರ್ಕಾರಿ ನೌಕರನ ವೇತನವನ್ನು ಮೇಲಿನ ಹುದ್ದೆಯಲ್ಲಿ ಅವನ ಕಿರಿಯ ನೌಕರನಿಗೆ ನಿಗದಿಗೊಳಿಸುವ ವೇತನಕ್ಕೆ ಸಮನಾದ ಮೊತ್ತಕ್ಕೆ ಏರಿಸುವುದು. ಈ ರೀತಿ ವೇತನ ಏರಿಕೆಯನ್ನು ಕಿರಿಯ ಸರ್ಕಾರಿ ನೌಕರನು ಬಡ್ತಿ ಹೊಂದಿದ ದಿನಾಂಕದಿಂದ ಜಾರಿಗೆ ಬರುವಂತೆ ಈ ಮುಂದಿನ ಷರತ್ತುಗಳನ್ನು ಈಡೇರಿಸುವುದಕೊಳಪಟ್ಟು ಮಾಡತಕ್ಕದ್ದು, ಎಂದರೆ :–

(ಅ) ಬಡ್ತಿಗೆ ಮುನ್ನ ಕಿರಿಯ ಮತ್ತು ಹಿರಿಯ ಸರ್ಕಾರಿ ನೌಕರರು ಧಾರಣಮಾಡಿರುವ ಹುದ್ದೆಗಳು ಒಂದೇ ಉದ್ಯೋಗಿ ವೃಂದಕ್ಕೆ ಸೇರಿರಬೇಕು ಮತ್ತು ಅವರು ಬಡ್ತಿ ಹೊಂದುವ ಹುದ್ದೆಗಳು ಒಂದೇ ಉದ್ಯೋಗಿ ವೃಂದಕ್ಕೆ ಸೇರಿರಬೇಕು ;

(ಆ) ಅವರು ವೇತನ ಪಡೆಯಲು ಅರ್ಹರಾಗಿರುವಂಥ ಕೆಳಗಿನ ಮತ್ತು ಮೇಲಿನ ಹುದ್ದೆಗಳ 'ಪ್ರಸಕ್ತ ವೇತನ ಶ್ರೇಣಿ' ಮತ್ತು 'ಪರಿಷ್ಕೃತ ವೇತನ ಶ್ರೇಣಿ' ಒಂದೇ ಆಗಿರಬೇಕು ;

(ಇ) ಕಿರಿಯ ಸರ್ಕಾರಿ ನೌಕರನು ಕೆಳಗಿನ ಹುದ್ದೆಯ ಪ್ರಸಕ್ತ ವೇತನ ಶ್ರೇಣಿಯಲ್ಲಿ ಹಿರಿಯ ಸರ್ಕಾರಿ ನೌಕರನಿಗಿಂತ ಹೆಚ್ಚು ವೇತನವನ್ನು ಪಡೆದಿದ್ದಿರಬಾರದು ; ಮತ್ತು

(ಈ) 'ಪರಿಷ್ಕೃತ ವೇತನ ಶ್ರೇಣಿ' ಯಲ್ಲಿ ಅಂಥ ಬಡ್ತಿಯ ಮೇಲಿನ ವೇತನ ನಿಗದಿಯನ್ನು ಕ್ರಮಬದ್ಧಗೊಳಿಸುವ ಕರ್ನಾಟಕ ಸರ್ಕಾರಿ ಸೇವಾ ನಿಯಮಗಳು ಅಥವಾ ಯಾವುದೇ ಇತರ ನಿಯಮ ಅಥವಾ ಆದೇಶದ ಅನ್ವಯದ ನೇರ ಪರಿಣಾಮದಿಂದಾಗಿ ಅಂಥ ತಾರತಮ್ಯ ಉಂಟಾಗಿದ್ದಿರಬೇಕು.

**8. ಪರಿಷ್ಕೃತ ವೇತನ ಶ್ರೇಣಿಯಲ್ಲಿ ಮುಂದಿನ ವಾರ್ಷಿಕ ವೇತನ ಬಡ್ತಿಯ ದಿನಾಂಕ :–**

(1) ಸರ್ಕಾರಿ ನೌಕರನ ಪ್ರಾರಂಭಿಕ ವೇತನವನ್ನು 7ನೇ ನಿಯಮದ (1)ರಿಂದ (4) ರವರೆಗಿನ ಉಪನಿಯಮಗಳ ಉಪಬಂಧಗಳಿಗನುಗುಣವಾಗಿ 1993ರ ಜುಲೈ 1ರಿಂದ ಜಾರಿಗೆ ಬರುವಂತೆ 'ಪರಿಷ್ಕೃತ ವೇತನ ಶ್ರೇಣಿ' ಯಲ್ಲಿ ನಿಗದಿಗೊಳಿಸಿದ ಅನಂತರ, ಅದರ ಮುಂದಿನ ವಾರ್ಷಿಕ ವೇತನ ಬಡ್ತಿಯು, ಅವನು ಪ್ರಸಕ್ತ ವೇತನ ಶ್ರೇಣಿಯಲ್ಲಿಯೇ ಮುದುವರಿದಿದ್ದರೆ ಪ್ರಸ್ತುತ ವೇತನ ಶ್ರೇಣಿಯಲ್ಲಿ ಅವನಿಗೆ ಯಾವಾಗ ವೇತನ ಬಡ್ತಿಯು ಪ್ರಾಪ್ತವಾಗುತ್ತಿತ್ತೋ ಆ ದಿನಾಂಕದಂದು ಪ್ರಾಪ್ತವಾಗತಕ್ಕದ್ದು ಮತ್ತು ಸರ್ಕಾರ ಹೊರಡಿಸುವಂಥ ನಿಯಮಗಳು ಅಥವಾ ಸಾಮಾನ್ಯ ಅಥವಾ ವಿಶೇಷ ಆದೇಶಗಳ ಮೇರೆಗೆ ಅವನಿಗೆ ಬರಬೇಕಾಗಿರುವ ಮತ್ತು ದೊರೆಯುವಂಥ ಯಾವುದೇ ಸ್ಥಗಿತ ವೇತನ ಬಡ್ತಿ ಸದರಿ ನಿಯಮಗಳು ಅಥವಾ ಆದೇಶಗಳಿಗನುಗುಣವಾಗಿ 'ಪರಿಷ್ಕೃತ ವೇತನ ಶ್ರೇಣಿ' ಯಲ್ಲಿ ಮಂಜೂರು ಮಾಡತಕ್ಕದ್ದು:

ಪರಂತು ಸರ್ಕಾರಿ ನೌಕರನಿಗೆ ವಾರ್ಷಿಕ ವೇತನ ಬಡ್ತಿ, ಸ್ಥಗಿತ ವೇತನ ಬಡ್ತಿ, ಪ್ರಸಕ್ತ ವೇತನ ಶ್ರೇಣಿಯಲ್ಲಿ ವಾಡಿಕೆಯ ಕ್ರಮದಲ್ಲಿ 1993ರ ಜುಲೈ 1ರ ತರುವಾಯದಲ್ಲಿ ಅಂದರೆ 1994ರ ಜುಲೈ 1ಕ್ಕೆ ಮೊದಲು ಪ್ರಾಪ್ತವಾಗುವಲ್ಲಿ 'ಪರಿಷ್ಕೃತ ವೇತನ ಶ್ರೇಣಿ' ಯಲ್ಲಿ ಆತನ

